# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 441 |
| ಸದಸ್ಯರ ಹೆಸರು | : | ಶ್ರೀ ಕೆ. ಎಸ್. ಈಶ್ವರಪ್ಪ (ಶಿವಮೊಗ್ಗ) |
| ಉತ್ತರಿಸಬೇಕಾದ ದಿನಾಂಕ | : | 11-07-2018 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. . |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೇಂದ್ರದಿಂದ ಈವರೆಗೆ ಸ್ಮಾರ್ಟ್ ಸಿಟಿ ಯೋಜನೆಗೆ ರಾಜ್ಯದಲ್ಲಿ ಆಯ್ಕೆಯಾಗಿರುವ ನಗರಗಳು ಯಾವುವು; ಯಾವ ಯಾವ ನಗರಗಳಲ್ಲಿ ಈ ಯೋಜನೆ ಪ್ರಾರಂಭಿಸಲಾಗಿದೆ; | ಕೇಂದ್ರ ಸರ್ಕಾರವು ಸ್ಮಾರ್ಟ್ ಸಿಟಿ ಅಭಿಯಾನದಡಿ ಕರ್ನಾಟಕದಿಂದ 7 ನಗರಗಳನ್ನು ಆಯ್ಕೆ ಮಾಡಲಾಗಿದೆ.<br>1. ಬೆಳಗಾವಿ 2. ದಾವಣಗೆರೆ 3. ಹುಬ್ಬಳ್ಳಿ-ಧಾರವಾಡ. 4. ಮಂಗಳೂರು 5. ಶಿವಮೊಗ್ಗ 6. ತುಮಕೂರು 7. ಬೆಂಗಳೂರು.<br>ಈ ಎಲ್ಲಾ ನಗರಗಳಲ್ಲಿ ಸ್ಮಾರ್ಟ್ ಸಿಟಿ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಯೋಜನೆಗಳನ್ನು ಅನುಷ್ಠಾನಗೊಳಸಲು ಕ್ರಮವಹಿಸಲಾಗಿದೆ. |
| ಆ) | ಕೇಂದ್ರದಿಂದ ಆಯ್ಕೆಯಾದ ನಗರಗಳಿಗೆ ಯಾವ ಯಾವ ಅವಧಿಯಲ್ಲಿ ಅನುದಾನ ಬಂದಿರುತ್ತದೆ; ಈ ಯೋಜನೆಯನ್ನು ಪ್ರಾರಂಭಿಸಲಾಗಿರುವ ಅವಧಿ ಯಾವುದು; | ಕೇಂದ್ರ ಸರ್ಕಾರವು ದಿ:25.06.2015 ರಂದು ಸ್ಮಾರ್ಟ್ ಸಿಟಿ ಅಭಿಯಾನಕ್ಕೆ ಚಾಲನೆ ನೀಡಿರುತ್ತದೆ. ಈ ಅಭಿಯಾನದಲ್ಲಿ ನಗರಗಳನ್ನು ಸ್ಪರ್ಧೆಯ ಮೂಲಕ ಆಯ್ಕೆ ಮಾಡಲಾಗುತ್ತಿದ್ದು, ಕರ್ನಾಟಕದ ನಗರಗಳು ಆಯ್ಕೆಯಾದ ದಿನಾಂಕ ಈ ಕೆಳಗಿನಂತಿದೆ: |

| ಕ್ರ.ಸ. | ನಗರಗಳು | ಆಯ್ಕೆಯಾದ ದಿನಾಂಕ | ಆಯ್ಕೆಯಾದ ಸುತ್ತು |
|---|---|---|---|
| 1 | ಬೆಳಗಾವಿ | 28/01/2016 | 1 |
| 2 | ದಾವಣಗೆರೆ | 28/01/2016 | 1 |
| 3 | ಹುಬ್ಬಳ್ಳಿ-ಧಾರವಾಡ | 03/10/2016 | 2 |
| 4 | ಮಂಗಳೂರು | 03/10/2016 | 2 |
| 5 | ಶಿವಮೊಗ್ಗ | 03/10/2016 | 2 |
| 6 | ತುಮಕೂರು | 03/10/2016 | 2 |
| 7 | ಬೆಂಗಳೂರು | 23/06/2017 | 3 |

ಕೇಂದ್ರದಿಂದ ಆಯ್ಕೆಯಾದ 7 ನಗರಗಳಿಗೆ ಬಿಡುಗಡೆಯಾದ ಅನುದಾನದ ವಿವರ ಈ ಕೆಳಗಿನಂತಿದೆ:

| ಕ್ರ.ಸ. | ನಗರಗಳು | ಬಿಡುಗಡೆಯಾದ ಮೊತ್ತ | | |
|---|---|---|---|---|
| | | ಕೇಂದ್ರ | ರಾಜ್ಯ | ಒಟ್ಟು |
| 1 | ಬೆಳಗಾವಿ | 196 | 200 | 396 |
| 2 | ದಾವಣಗೆರೆ | 196 | 200 | 396 |
| 3 | ಹುಬ್ಬಳ್ಳಿ-ಧಾರವಾಡ | 111 | 105 | 216 |
| 4 | ಮಂಗಳೂರು | 111 | 105 | 216 |
| 5 | ಶಿವಮೊಗ್ಗ | 111 | 105 | 216 |
| 6 | ತುಮಕೂರು | 111 | 105 | 216 |
| 7 | ಬೆಂಗಳೂರು | - | - | - |
| | ಒಟ್ಟು | 836 | 820 | 1656 |

(ರೂ. ಕೋಟಿಗಳಲ್ಲಿ)

| ಕ್ರ. | ವರ್ಷ | ಕೇಂದ್ರ | ರಾಜ್ಯ | ನಗರಗಳು |
|---|---|---|---|---|
| 1 | 2015-2016 | 12 | - | ಎಲ್ಲಾ ಆರು ನಗರಗಳಿಗೆ ತಲಾ ರೂ.2.00 ಕೋಟಿ |
| 2 | 2016-2017 | 388 | 400 | ಬೆಳಗಾವಿ -ರೂ.394.00<br>ದಾವಣಗೆರೆ -ರೂ.394.00 |
| 3 | 2017-2018 | 436 | 420 | ಹುಬ್ಬಳ್ಳಿ-ಧಾರವಾಡ, ಮಂಗಳೂರು, ಶಿವಮೊಗ್ಗ & ತುಮಕೂರು ನಗರಗಳಿಗೆ ತಲಾ ರೂ.214.00 ಕೋಟಿ |
| | ಒಟ್ಟು | 836 | 820 | |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 466

ಉತ್ತರಿಸುವ ದಿನಾಂಕ : 11.07.2018.

ಸದಸ್ಯರ ಹೆಸರು : ಶ್ರೀ ಟಿ. ವೆಂಕಟರಮಣಯ್ಯ (ದೊಡ್ಡಬಳ್ಳಾಪುರ)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಯವರು

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರದಲ್ಲಿ ಈಗಾಗಲೇ ಸ್ಥಾಪಿತವಾಗಿರುವ ಜಿಲ್ಲಾ ಕ್ರೀಡಾಂಗಣವನ್ನು ಸುಸಜ್ಜಿತವಾಗಿ ನಿರ್ಮಾಣ ಮಾಡುವ ಉದ್ದೇಶ ಸರ್ಕಾರದ ಮುಂದಿದೆಯೇ; | ದೊಡ್ಡಬಳ್ಳಾಪುರದಲ್ಲಿ ತಾಲ್ಲೂಕು ಕ್ರೀಡಾಂಗಣವನ್ನು ನಿರ್ಮಿಸಲಾಗಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕ್ರೀಡಾಂಗಣವನ್ನು ನಿರ್ಮಿಸಲು ಪ್ರತ್ಯೇಕವಾಗಿ ನಿವೇಶನವನ್ನು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಗುರುತಿಸಲಾಗಿದೆ. |
| ಆ | ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರದ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಆದಿನಾರಾಯಣ ಹೊಸಹಳ್ಳಿ ಗ್ರಾಮದಲ್ಲಿ 9.36 ಎಕರೆ ವಿಸ್ತೀರ್ಣದ ನಿವೇಶನವನ್ನು ಜಿಲ್ಲಾ ಕ್ರೀಡಾಂಗಣವನ್ನು ನಿರ್ಮಿಸಲು ಮಂಜೂರು ಮಾಡಲಾಗಿದೆ. ಈ ನಿವೇಶನದ ಸುತ್ತಲೂ ಚೈನ್‌ಲಿಂಕ್ ಬೇಲಿ ನಿರ್ಮಿಸಲು ಈಗಾಗಲೇ ಕ್ರಮಕೈಗೊಳ್ಳಲಾಗಿದ್ದು, ಸುಸಜ್ಜಿತ ಕ್ರೀಡಾಂಗಣವನ್ನು ನಿರ್ಮಿಸಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಯುಸೇಇ 61 ಯುಸೇಭಾ 2018.

(ಡಾ|| ಜಿ. ಪರಮೇಶ್ವರ)
ಮಾನ್ಯ ಉಪ ಮುಖ್ಯಮಂತ್ರಿಗಳು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 515 |
| ಉತ್ತರಿಸುವ ದಿನಾಂಕ | : 11.07.2018. |
| ಸದಸ್ಯರ ಹೆಸರು | : ಶ್ರೀ ಗೂಳಿಹಟ್ಟಿ ಬಿ. ಶೇಖರ್ (ಹೊಸದುರ್ಗ) |
| ಉತ್ತರಿಸುವ ಸಚಿವರು | : ಮಾನ್ಯ ಉಪ ಮುಖ್ಯಮಂತ್ರಿಯವರು |

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಸಿಂಥೆಟಿಕ್ ಅಥ್ಲೆಟಿಕ್ ಕ್ರೀಡಾಂಗಣಗಳನ್ನು ಹೆಲಿಕ್ಯಾಪ್ಟರ್‌ಗಳನ್ನು ಇಳಿಸಲು ಉಪಯೋಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಬಂದಿದ್ದಲ್ಲಿ, ಕ್ರೀಡಾಂಗಣಗಳನ್ನು ಕ್ರೀಡೆಗೆ ಬಳಸಿಕೊಳ್ಳದೆ, ವಾಹನಗಳನ್ನು ನಿಲ್ಲಿಸಲು ಉಪಯೋಗಿಸುತ್ತಿರುವುದರಿಂದ ಉಂಟಾಗುತ್ತಿರುವ ಹಾನಿಗೆ ಯಾರನ್ನು ಹೊಣೆಗಾರರನ್ನಾಗಿ ಮಾಡಲಾಗಿದೆ? (ವಿವರ ಒದಗಿಸುವುದು) | ತುರ್ತು ಸಂದರ್ಭಗಳಲ್ಲಿ ಮತ್ತು ಗಣ್ಯವ್ಯಕ್ತಿಗಳ ಭದ್ರತಾ ಹಿತದೃಷ್ಟಿಯಿಂದ ಆಯಾ ಜಿಲ್ಲೆಗಳ ಜಿಲ್ಲಾಡಳಿತದ ಅನುಮತಿ ಪಡೆದು, ಸಿಂಥೆಟಿಕ್ ಅಥ್ಲೆಟಿಕ್ಸ್ ಟ್ರ್ಯಾಕ್‌ಗೆ ಯಾವುದೇ ಹಾನಿಯಾಗದಂತೆ ಮುಂಜಾಗ್ರತೆ ಕ್ರಮವಹಿಸಿ, ಕ್ರೀಡಾಂಗಣಗಳಲ್ಲಿ ಹೆಲಿಕಾಪ್ಟರ್‌ಗಳನ್ನು ಇಳಿಸಲು ಅವಕಾಶ ನೀಡಲಾಗಿದೆ.<br><br>ಕ್ರೀಡಾಂಗಣದ ಒಳಗಡೆ ವಾಹನಗಳಿಗೆ ಪ್ರವೇಶವಿರುವುದಿಲ್ಲ. ಹೆಲಿಕಾಪ್ಟರ್‌ಗಳನ್ನು ಕ್ರೀಡಾಂಗಣದ ಮಧ್ಯದಲ್ಲಿ ಇಳಿಸಿ, ನಿಲ್ಲಿಸಲಾಗುತ್ತಿದ್ದು, ಇದರಿಂದ ಸಿಂಥೆಟಿಕ್ ಅಥ್ಲೆಟಿಕ್ಸ್ ಟ್ರ್ಯಾಕ್‌ಗೆ ಯಾವುದೇ ಹಾನಿಯಾಗುವುದಿಲ್ಲ. ಕ್ರೀಡಾಂಗಣದ ಯಾವುದೇ ಆಸ್ತಿ-ಪಾಸ್ತಿಗೆ ಹಾನಿಯಾದ ಪಕ್ಷದಲ್ಲಿ ಅನುಮತಿ ಪಡೆದ ಅಭ್ಯರ್ಥಿ/ವ್ಯಕ್ತಿಗಳಿಂದ ಕಾನೂನು ರೀತ್ಯಾ ದಂಡನಾ ಶುಲ್ಕವನ್ನು ವಸೂಲಿ ಮಾಡಿ, ದುರಸ್ತಿಗೆ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಯುಸೇಇ 53 ಯುಸೇಭಾ 2018.

(ಡಾ॥ ಜಿ. ಪರಮೇಶ್ವರ)
ಮಾನ್ಯ ಉಪ ಮುಖ್ಯಮಂತ್ರಿಗಳು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 518
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಆರಗ ಜ್ಞಾನೇಂದ್ರ
ಉತ್ತರಿಸಬೇಕಾದ ದಿನಾಂಕ : 11.07.2018

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಈ ಹಿಂದಿನ ಸರ್ಕಾರ ರೂ.50.000/-ಗಳ ಸಾಲಮನ್ನಾ ಮಾಡಿದ ಫಲಾನುಭವಿಗಳಿಗೆ ಹೊಸ ಸಾಲ ನೀಡಲಾಗಿದೆಯೇ: (ವಿವಿಧ ಸಹಕಾರ ಬ್ಯಾಂಕುಗಳಲ್ಲಿ ಸಾಲ ಕೊಟ್ಟಿರುವ ಜಿಲ್ಲಾವಾರು ಮಾಹಿತಿ ನೀಡುವುದು). | 2017-18ನೇ ಸಾಲಿನ ಸಾಲ ಮನ್ನಾ ಯೋಜನೆಯಲ್ಲಿ 22.27.506 ರೈತರಿಗೆ ರೂ.8165 ಕೋಟಿ ಸಾಲ ಮನ್ನಾ ಪ್ರಯೋಜನೆ ಆಗುವುದಾಗಿ ಅಂದಾಜಿಸಲಾಗಿತ್ತು. ವಾಸ್ತವವಾಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ 22,00,024 ರೈತರಿಗೆ ಸಾಲ ಮನ್ನಾ ಸೌಲಭ್ಯ ದೊರೆತಿರುತ್ತದೆ. ಈ ಪೈಕಿ ದಿನಾಂಕ:01-07-2017 ರಿಂದ ದಿನಾಂಕ:30-06-2018 ರ ವರೆಗೆ 19,17,737 ರೈತರಿಗೆ 9914.42 ಕೋಟಿಗಳ ಬೆಳೆ ಸಾಲ ವಿತರಿಸಿದ್ದು, 2,82,287 ರೈತರಿಗೆ ಸಾಲ ವಿತರಿಸಲು ಬಾಕಿ ಇರುತ್ತದೆ.<br><br>ಸಹಕಾರ ಬ್ಯಾಂಕುಗಳಲ್ಲಿ ಸಾಲ ವಿತರಿಸಿರುವ ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಹೊಸ ಸಾಲ ನೀಡದಿದ್ದಲ್ಲಿ ಈ ಸಾಲಿನ ಮುಂಗಾರು ಕೃಷಿ ಚಟುವಟಿಕೆಗಳನ್ನು ಕೈಗೊಳ್ಳಲು ರೈತರಿಗೆ ತೊಂದರೆಯಾಗುವುದು. ಸರ್ಕಾರದ ಗಮನಕ್ಕೆ ಬಂದಿದೆಯೇ? | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಇ) | ಬಂದಿದ್ದಲ್ಲಿ, ಹೊಸ ಸಾಲ ವಿತರಣೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | 2017-18ನೇ ಸಾಲಿನಲ್ಲಿ ಸರ್ಕಾರದಿಂದ ರೂ. 4971.99 ಕೋಟಿಗಳ ಸಾಲ ಮನ್ನಾ ಮೊತ್ತ ಬಿಡುಗಡೆ ಮಾಡಲಾಗಿದ್ದು, ಉಳಿದ ಮೊತ್ತವನ್ನು ಬಿಡುಗಡೆ ಮಾಡಲು 2018-19ರಲ್ಲಿ ರೂ.4000.00 ಕೋಟಿಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ. ಮೊದಲನೇ ಕಂತಿನ ಅನುದಾನ ರೂ.1000.00 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಗೆ ಪ್ರಸ್ತಾವೆ ಸಲ್ಲಿಸಿದ್ದು, ಬಿಡುಗಡೆ ನಿರೀಕ್ಷೆಯಲ್ಲಿರುತ್ತದೆ. ಸಹಕಾರ ಸಂಸ್ಥೆಗಳಲ್ಲಿ ಹಣಕಾಸಿನ ಲಭ್ಯತೆಯನ್ನಾಧರಿಸಿ ಹಂತ ಹಂತವಾಗಿ ಹೊಸ ಸಾಲ ವಿತರಿಸಲು ಕ್ರಮವಿಡಲಾಗುತ್ತಿದೆ. |

ಸಂಖ್ಯೆ: ಸಿಒ 126 ಸಿಎಲ್ಎಸ್ 2018

(ಬಂಡೆಪ್ಪ ಕಾಶೆಂಪೂರ)
ಸಹಕಾರ ಸಚಿವರು.

## ಅನುಬಂಧ

### ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ಮೂಲಕ ವಿತರಿಸಿದ ಅಲ್ಪಾವಧಿ ಕೃಷಿ ಸಾಲದ ವಿವರ

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಜಿಲ್ಲೆಯ ಹೆಸರು | ಸಂಖ್ಯೆ | ಮೊತ್ತ |
|---|---|---|---|
| 1 | ಬಾಗಲಕೋಟೆ | 218568 | 110618.56 |
| 2 | ಬೆಂ.ಗ್ರಾಮಾಂತರ | 7088 | 3299.09 |
| 3 | ಬೆಂಗಳೂರು | 14682 | 6833.84 |
| 4 | ರಾಮನಗರ | 28857 | 13432.03 |
| 5 | ಬೆಳಗಾಂ | 303837 | 124108.45 |
| 6 | ಬಳ್ಳಾರಿ | 61501 | 41947.18 |
| 7 | ಬೀದರ್ | 78985 | 42155.17 |
| 8 | ಬಿಜಾಪುರ | 163489 | 78888.66 |
| 9 | ಚಿಕ್ಕಮಗಳೂರು | 20318 | 27976.81 |
| 10 | ಚಿತ್ರದುರ್ಗ | 30663 | 16023.62 |
| 11 | ದಾವಣಗೆರೆ | 70568 | 21653.14 |
| 12 | ಧಾರವಾಡ | 21960 | 7111.69 |
| 13 | ಗದಗ | 20588 | 6667.21 |
| 14 | ಹಾವೇರಿ | 26077 | 8445.13 |
| 15 | ಗುಲ್ಬರ್ಗಾ | 73679 | 20561.84 |
| 16 | ಯಾದಗಿರ | 43272 | 12075.69 |
| 17 | ಹಾಸನ | 127080 | 49066.22 |
| 18 | ಕೆನರಾ | 108848 | 73591.38 |
| 19 | ಕೊಡಗು | 28291 | 44644.2 |
| 20 | ಕೋಲಾರ | 5063 | 5750.88 |
| 21 | ಚಿಕ್ಕಬಳ್ಳಾಪುರ | 7920 | 8994.97 |
| 22 | ಮಂಡ್ಯ | 116971 | 54914.16 |
| 23 | ಮೈಸೂರು | 43659 | 35913.40 |
| 24 | ಚಾಮರಾಜನಗರ | 5396 | 4438.70 |
| 25 | ರಾಯಚೂರು | 52134 | 17196.80 |
| 26 | ಕೊಪ್ಪಳ | 28072 | 9259.81 |
| 27 | ದ.ಕನ್ನಡ | 68427 | 77508.24 |
| 28 | ಉಡುಪಿ | 14015 | 15875.18 |
| 29 | ಶಿವಮೊಗ್ಗ | 44275 | 19605.22 |
| 30 | ತುಮಕೂರು | 83454 | 32886.44 |
| ಒಟ್ಟು | | 1917737 | 991443.71 |

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 510**
**ಉತ್ತರಿಸುವ ದಿನಾಂಕ : 11.07.2018.**
**ಸದಸ್ಯರ ಹೆಸರು : ಶ್ರೀ ಡಾ॥ ಉಮೇಶ್ ಜಿ. ಜಾಧವ್ (ಚಿಂಚೋಳಿ)**
**ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಯವರು**

| ಕ್ರಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಿಂಚೋಳಿ ತಾಲ್ಲೂಕಿನಲ್ಲಿ ನಿರ್ಮಾಣ ಮಾಡಲಾದ ಕ್ರೀಡಾಂಗಣಕ್ಕೆ ಮೂಲಭೂತ ಸೌಕರ್ಯ ಕಲ್ಪಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು) | ಚಿಂಚೋಳಿ ತಾಲೂಕು ಕ್ರೀಡಾಂಗಣವನ್ನು ಅಭಿವೃದ್ಧಿಪಡಿಸಲು ಅಂದಾಜು ವೆಚ್ಚ ಮತ್ತು ನಕ್ಷೆಯನ್ನು ಸಿದ್ಧಪಡಿಸಿ, ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಅನುದಾನ ಮಂಜೂರಾತಿಗಾಗಿ ಪ್ರಸ್ತಾವನೆ ಸಲ್ಲಿಸಲಾಗಿರುತ್ತದೆ. ಸದರಿ ಅಂದಾಜು ಪಟ್ಟಿಯಲ್ಲಿನ ಕೆಲವು ಅಂಶಗಳ ಬದಲಾವಣೆ ಕೈಗೊಳ್ಳಲು ತಿಳಿಸಿ, ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಅಂದಾಜು ಪಟ್ಟಿ ಹಿಂದಿರುಗಿಸಲಾಗಿರುತ್ತದೆ. ಸದರಿ ಬದಲಾವಣೆಗಳನ್ನು ಅಳವಡಿಸಿಕೊಂಡು, ಪರಿಷ್ಕೃತ ಅಂದಾಜು ಪಟ್ಟಿಯನ್ನು ಸಿದ್ಧಪಡಿಸಿ, ಶೀಘ್ರ ಮಂಜೂರಾತಿಗಾಗಿ ಹೈದ್ರಾಬಾದ್-ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ಸಲ್ಲಿಸಲಾಗುವುದು. |
| ಆ | ಸದರಿ ಕ್ರೀಡಾಂಗಣಕ್ಕೆ ಕೂಡು ರಸ್ತೆ, ವಿದ್ಯುತ್ ಸಂಪರ್ಕ, ನೀರಿನ ಸೌಲಭ್ಯ ಹಾಗೂ ಇತರೆ ವ್ಯವಸ್ಥೆಗಳ ಕೊರತೆಯಿದ್ದು, ನಿಗಧಿತ ಅವಧಿಯಲ್ಲಿ ಸೌಲಭ್ಯಗಳನ್ನು ಕಲ್ಪಿಸಲು ಕ್ರಮ ಕೈಗೊಳ್ಳಲಾಗುವುದೆ?(ವಿವರ ನೀಡುವುದು) | ಕ್ರೀಡಾಂಗಣಕ್ಕೆ ಕೂಡು ರಸ್ತೆ, ವಿದ್ಯುತ್ ಸಂಪರ್ಕ, ನೀರು ಸರಬರಾಜು ಮತ್ತಿತರ ಸೌಲಭ್ಯಗಳ ಬಗ್ಗೆಯೂ ಸಹ ತಾಲ್ಲೂಕು ಕ್ರೀಡಾಂಗಣ ಸಮಿತಿಯ ಮೂಲಕ ಅಭಿವೃದ್ಧಿಪಡಿಸಲು ಕ್ರಮ ವಹಿಸಲಾಗುವುದು. |

**ಸಂಖ್ಯೆ: ಯುಸೇಇ 60 ಯುಸೇಭಾ 2018.**

(ಡಾ॥ ಜಿ. ಪರಮೇಶ್ವರ)
ಮಾನ್ಯ ಉಪ ಮುಖ್ಯಮಂತ್ರಿಗಳು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 474
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಸಂಜೀವ್ ಮಠಂದೂರ್
ಉತ್ತರಿಸಬೇಕಾದ ದಿನಾಂಕ : 11.07.2018

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮಂಗಳೂರಿನಲ್ಲಿ ದಕ್ಷಿಣ ಕನ್ನಡ ಕೃಷಿಕರ ಸಹಕಾರಿ ಮಾರಾಟ ಸಂಘ ನಿ. ಅಸ್ತಿತ್ವದಲ್ಲಿ ಇದೆಯೇ; ಇದ್ದಲ್ಲಿ ಇದಕ್ಕೆ ಆಡಳಿತ ಮಂಡಳಿ ಇದೆಯೇ; ಅಥವಾ ಆಡಳಿತಾಧಿಕಾರಿ ಕಾರ್ಯ ನಿರ್ವಹಣೆಯನ್ನು ಮಾಡುತ್ತಿದ್ದಾರೆಯೇ; (ವಿವರ ಒದಗಿಸುವುದು.) | ಸಂಘವು ಅಸ್ತಿತ್ವದಲ್ಲಿಲ್ಲ.<br>ಸಂಘವನ್ನು ದಿನಾಂಕ:19.03.2015 ರಂದು ಸಮಾಪನೆಗೊಳಿಸಿ. ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಂಗಳೂರು ಉಪವಿಭಾಗ ಮಂಗಳೂರು ಇವರನ್ನು ಸಂಘಕ್ಕೆ ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ಸಮಾಪನಾ ಸಂಘದ ಕಾರ್ಯ ನಿರ್ವಹಣೆಯನ್ನು ಸಮಾಪನಾಧಿಕಾರಿಗಳು ನಿರ್ವಹಿಸುತ್ತಿರುತ್ತಾರೆ. |
| ಆ) | ಈ ಸಹಕಾರಿ ಸಂಸ್ಥೆ ಲಾಭದಲ್ಲಿದೆಯೇ; ಅಥವಾ ನಷ್ಟದಲ್ಲಿದೆಯೇ; | ಈ ಸಂಸ್ಥೆಯು ನಷ್ಟದಲ್ಲಿರುತ್ತದೆ. |
| ಇ) | ನಷ್ಟದಲ್ಲಿದ್ದಲ್ಲಿ ಈ ಸಂಸ್ಥೆಯ ಪುನಃಶ್ಚೇತನಕ್ಕೆ ಸರಕಾರ ಯಾವ ಕ್ರಮ ತೆಗೆದುಕೊಂಡಿದೆ? | ಸಂಸ್ಥೆಯು ನಷ್ಟದಲ್ಲಿದ್ದು. ಸಮಾಪನೆ ಗೊಂಡಿರುವುದರಿಂದ ಪುನಃಶ್ಚೇತನಕ್ಕೆ ಅವಕಾಶವಿರುವುದಿಲ್ಲ.<br>........... |

ಸಂಖ್ಯೆ: ಸಿಒ 63 ಸಂಮಾಸ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.

ಕರ್ನಾಟಕ ವಿಧಾನಸಭೆ

15ನೇ ವಿಧಾನಸಭೆ

1ನೇ ಅಧಿವೇಶನ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 489
ಸದಸ್ಯರ ಹೆಸರು : ಶ್ರೀ ಅಭಯ್ ಪಾಟೀಲ್ (ಬೆಳಗಾಂ ದಕ್ಷಿಣ)
ಉತ್ತರಿಸುವ ದಿನಾಂಕ : 11-07-2018
ಉತ್ತರಿಸುವ ಸಚಿವರು : ಮಾನ್ಯ ಲೋಕೋಪಯೋಗಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಳಗಾವಿ ತಾಲೂಕಿನಲ್ಲಿ ಬರುವ ಲೋಕೋಪಯೋಗಿ ಇಲಾಖೆಯ ರಸ್ತೆಗಳು ಯಾವುವು; (ಕ್ಷೇತ್ರವಾರು ವಿವರ ನೀಡುವುದು) | ಬೆಳಗಾವಿ ತಾಲೂಕಿನಲ್ಲಿ ವ್ಯಾಪ್ತಿಯಲ್ಲಿ ಬೆಳಗಾವಿ ಗ್ರಾಮೀಣ, ಬೆಳಗಾವಿ ದಕ್ಷಿಣ, ಬೆಳಗಾವಿ ಉತ್ತರ ಹಾಗೂ ಯಮಕನಮರಡಿ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯಲ್ಲಿನ ರಸ್ತೆಗಳ ವಿವರಗಳನ್ನು **ಅನುಬಂಧ-1ರಲ್ಲಿ ಒದಗಿಸಿದೆ.** |
| ಆ | ಕಳೆದ ಮೂರು ವರ್ಷಗಳಲ್ಲಿ ಬೆಳಗಾವಿ (ದಕ್ಷಿಣ) ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ರಸ್ತೆಗಳನ್ನು ವಿವಿಧ ಯೋಜನೆಯಲ್ಲಿ ಎಷ್ಟು ಮೊತ್ತದಲ್ಲಿ ಅಭಿವೃದ್ಧಿ ಕಾಮಗಾರಿ ಕೈಕೊಳ್ಳಲಾಗಿದೆ: (ವರ್ಷವಾರು, ಯೋಜನೆವಾರು ಮಾಹಿತಿ ನೀಡುವುದು) | 2015-16, 2016-17 ಹಾಗೂ 2017-18ನೇ ಸಾಲಿನಲ್ಲಿ ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ವಿವಿಧ ಯೋಜನೆಗಳಡಿ ಕೈಗೆತ್ತಿಕೊಳ್ಳಲಾದ ಕಾಮಗಾರಿಗಳ ಯೋಜನಾವಾರು ಹಾಗೂ ವರ್ಷವಾರು ವಿವರಗಳನ್ನು **ಅನುಬಂಧ-2ರಲ್ಲಿ ಒದಗಿಸಿದೆ.** |
| ಇ | ಬೆಳಗಾವಿ ದಕ್ಷಿಣ ಮತಕ್ಷೇತ್ರದ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಉದ್ದೇಶವು ಸರ್ಕಾರಕ್ಕೆ ಇದೆಯೇ: ಇದಲ್ಲಿ ಯಾವ ಯಾವ ರಸ್ತೆಗಳನ್ನು ಮೇಲ್ದರ್ಜೆಗೇರಿಸಲಾಗುವುದು: | ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ 35.00 ಕಿಮೀ ಉದ್ದದ 6 ರಸ್ತೆಗಳನ್ನು ಮೇಲ್ದರ್ಜೆಗೇರಿಸಲು ಮಾನ್ಯ ಶಾಸಕರು, ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ಇವರು ಕೋರಿದ್ದು, ಸದರಿ ರಸ್ತೆಗಳ ವಿವರಗಳನ್ನು **ಅನುಬಂಧ-3ರಲ್ಲಿ** ಒದಗಿಸಿದೆ. |
| ಈ | ಇತ್ತೀಚಿಗೆ ಬೆಳಗಾವಿ ದಕ್ಷಿಣ ಮತಕ್ಷೇತ್ರದ ರಸ್ತೆಗಳ ದುರಸ್ತಿಗಾಗಿ ಯಾರು ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ ಮತ್ತು ಆ ರಸ್ತೆಗಳು ಯಾವುವು; | ಮಾನ್ಯ ಶಾಸಕರು ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ಇವರು, ಬೆಳಗಾವಿ ದಕ್ಷಿಣ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿನ ರಾಜ್ಯ ಹೆದ್ದಾರಿ ಹಾಗೂ ಜಿಲ್ಲಾ ಮುಖ್ಯ ರಸ್ತೆಗಳ ಅಭಿವೃದ್ಧಿಗಾಗಿ ಅನುದಾನ ಒದಗಿಸಲು ಕೋರಿರುತ್ತಾರೆ. ಸದರಿ ರಸ್ತೆಗಳ ವಿವರಗಳನ್ನು **ಅನುಬಂಧ-4ರಲ್ಲಿ ಒದಗಿಸಿದೆ.** |
| ಉ | ಪ್ರಸ್ತಾಪಿತ ರಸ್ತೆಗಳ ಅಭಿವೃದ್ಧಿಯನ್ನು ಯಾವ ಯಾವ ಯೋಜನೆಯಲ್ಲಿ ಪರಿಗಣಿಸಿ ಅಭಿವೃದ್ಧಿಗೊಳಿಸಲು ಅನುದಾನವನ್ನು ಬಿಡುಗಡೆಗೊಳಿಸಲಾಗುವುದು? (ಮಾಹಿತಿ ನೀಡುವುದು) | ಸದರಿ ರಸ್ತೆಗಳ ಅಭಿವೃದ್ಧಿಗೆ ಅನುದಾನ ಲಭ್ಯತೆಯನ್ವಾಧರಿಸಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳುವ ಬಗ್ಗೆ ಆದ್ಯತೆ ಮೇರೆಗೆ ಪರಿಶೀಲಿಸಲಾಗುವುದು. |

ಲೋಇ/430/ಐಎಫ್ಎ/2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

**ಕರ್ನಾಟಕ ವಿಧಾನಸಭೆ**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 279 |
| ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ನೆಹರು ಓಲೇಕರ್ (ಹಾವೇರಿ) |
| ಉತ್ತರಿಸಬೇಕಾದ ದಿನಾಂಕ | : | 11.07.2018 |
| ಉತ್ತರಿಸುವ ಸಚಿವರು | : | ಮಾನ್ಯ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಪಡಿತರ ಚೀಟಿ ವಿತರಣೆ ವ್ಯವಸ್ಥೆ ಅಸ್ತವ್ಯಸ್ತವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಲ್ಲ. ಚುನಾವಣಾ ನೀತಿ ಸಂಹಿತೆ ಜಾರಿಯಾದ ಕಾರಣ ಮಾತ್ರ ಪಡಿತರ ಚೀಟಿ ವಿತರಣೆಯನ್ನು ಸ್ಥಗಿತಗೊಳಿಸಲಾಗಿತ್ತು. |
| ಆ) | ಬಡವರಿಗೆ ಎ.ಪಿ.ಎಲ್ ಶ್ರೀಮಂತರಿಗೆ ಬಿ.ಪಿ.ಎಲ್ ಕಾರ್ಡ್ ವಿತರಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರಿ ಆದೇಶ ಸಂಖ್ಯೆ: ಆನಾಸ 116 ಡಿಆರ್ಎ 2015, ಬೆಂಗಳೂರು, ದಿನಾಂಕ: 25.03.2017 ಮತ್ತು 20.05.2017 ರಂತೆ ಈ ಕೆಳಕಂಡ ಮಾನದಂಡಗಳನ್ನು ಹೊರತುಪಡಿಸಿ, ಆದ್ಯತಾ ಪಡಿತರ ಚೀಟಿ ಪಡೆಯಬಹುದು.<br>1. ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ, ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ಮಂಡಳಿಗಳು/ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ: ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br>2. ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶದಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>3. ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ, ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>4. ಕುಟುಂಬದ ವಾರ್ಷಿಕ ಆದಾಯವು ರೂ.1.20 ಲಕ್ಷ ಹಾಗೂ ಹೆಚ್ಚಿಗೆ ಇರುವ ಕುಟುಂಬಗಳು.<br>ಮೇಲಿ ಮಾನದಂಡಗಳ ಕ್ರಮ ಸಂಖ್ಯೆ 4 ರ ವಾರ್ಷಿಕ ವರಮಾನದ ವಿವರಗಳನ್ನು ಕಂದಾಯ ಇಲಾಖೆಯಿಂದಲೇ ಆನ್‌ಲೈನ್ ವ್ಯವಸ್ಥೆಯ ಮೂಲಕ ಪಡೆದು ದಾಖಲಿಸಲಾಗುತ್ತಿದೆ.<br>ಮೇಲಿನ ಮಾನದಂಡಗಳಂತೆ ಆದ್ಯತಾ ಪಡಿತರ ಚೀಟಿಗಳನ್ನು ವಿತರಿಸಲಾಗುತ್ತಿದೆ ಹಾಗೂ ಈ ರೀತಿ ವಿತರಿಸಿರುವ ಪಡಿತರ ಚೀಟಿ ಫಲಾನುಭವಿಗಳನ್ನು ವರ್ಷಕ್ಕೆ ಒಂದು ಬಾರಿಯಾದರೂ ಅವರ "ಆದ್ಯತಾ" ಅರ್ಹತೆಗಳನ್ನು ಸೂಚಿಸಲು ವಿಶೇಷ ಆಂದೋಲನವನ್ನು ಜಾರಿಗೊಳಿಸಲಾಗುವುದು |

| | | |
|---|---|---|
| ಇ) | ಹಾಗಿದ್ದಲ್ಲಿ, ಬಡವರಿಗೂ ಬಿ.ಪಿ.ಎಲ್. ಕಾರ್ಡ್ ವಿತರಿಸಲು ಕ್ರಮ ಕೈಗೊಳ್ಳಲಾಗುವುದೇ: ಯಾವಾಗ ನೀಡಲಾಗುವುದು? (ವಿವರ ನೀಡುವುದು) | "ಆ" ನಲ್ಲಿ ವಿವರಿಸಿರುವಂತೆ ಪುನಃ ಆನ್‌ಲೈನ್‌ನಲ್ಲಿ ಸ್ವೀಕೃತವಾಗಿರುವ ಅರ್ಜಿಗಳ ವಿಲೇವಾರಿ ಕಾರ್ಯವನ್ನು ಆರಂಭಿಸಲಾಗುತ್ತಿದೆ. |

ಆನಾಸ 158 ಡಿಆರ್‌ಎ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 483 |
| ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು | : | ಶ್ರೀ ಬಸವರಾಜ್ ಮತ್ತಿಮುಡ (ಗುಲ್ಬರ್ಗಾ ಗ್ರಾಮಾಂತರ). |
| ಉತ್ತರಿಸಬೇಕಾದ ದಿನಾಂಕ | : | 11.07.2018. |
| ಉತ್ತರಿಸುವ ಸಚಿವರು | : | ಮಾನ್ಯ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರ್ಗಿ ಗ್ರಾಮಾಂತರ ಕ್ಷೇತ್ರದಲ್ಲಿ ಇರುವ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ಒದಗಿಸುವುದು) | ಕಲಬುರ್ಗಿ ಗ್ರಾಮಾಂತರ ಕ್ಷೇತ್ರದಲ್ಲಿರುವ ನ್ಯಾಯಬೆಲೆ ಅಂಗಡಿಗಳ ಸಂಖ್ಯೆ:76. |
| ಆ) | ಕಳೆದ ಮೂರು ವರ್ಷಗಳಲ್ಲಿ ಈ ಕ್ಷೇತ್ರಕ್ಕೆ ಮಂಜೂರಾದ ನ್ಯಾಯಬೆಲೆ ಅಂಗಡಿಗಳು ಎಷ್ಟು; ವಿತರಿಸಿದ ಕಾರ್ಡುಗಳ ಸಂಖ್ಯೆ ಎಷ್ಟು? (ಸಂಪೂರ್ಣ ವಿವರ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಈ ಕ್ಷೇತ್ರಕ್ಕೆ ಯಾವುದೇ ನ್ಯಾಯಬೆಲೆ ಅಂಗಡಿಗಳು ಮಂಜೂರಾಗಿರುವುದಿಲ್ಲ. |

ಆನಾಸ 68 ಎಫ್‌ಸಿಎಸ್ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 463
ಮಾನ್ಯ ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಟಿ.ಡಿ. ರಾಜೇಗೌಡ (ಶೃಂಗೇರಿ)
ಉತ್ತರಿಸಬೇಕಾದ ದಿನಾಂಕ : 11.07.2018.
ಉತ್ತರಿಸುವ ಸಚಿವರು : ಮಾನ್ಯ ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ & ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು.

<table>
<tr><th>ಕ್ರಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಶೃಂಗೇರಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಶೃಂಗೇರಿ –ಕೊಪ್ಪ–ಎನ್.ಆರ್.ಪುರ ತಾಲ್ಲೂಕುಗಳಲ್ಲಿ ಬಿ.ಪಿ.ಎಲ್ ಪಡಿತರ ಚೀಟಿ ಸಮರ್ಪಕವಾಗಿ ವಿತರಣೆಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: (ಮಾಹಿತಿ ಒದಗಿಸುವುದು)</td><td>ಇಲ್ಲ.<br><br>ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ವಿತರಿಸಲಾದ ಪಡಿತರ ಚೀಟಿ ವಿವರ:<br><br>
<table>
<tr><th>ತಾಲ್ಲೂಕು</th><th>ಸ್ವೀಕರಿಸಿದ ಅರ್ಜಿ ಸಂಖ್ಯೆ</th><th>ವಿತರಿಸಿದ ಪಡಿತರ ಚೀಟಿ</th><th>ಬಾಕಿ ಇರುವ ಅರ್ಜಿಗಳು</th></tr>
<tr><td>ಶೃಂಗೇರಿ</td><td>819</td><td>597</td><td>309</td></tr>
<tr><td>ಕೊಪ್ಪ–</td><td>1685</td><td>1346</td><td>306</td></tr>
<tr><td>ಎನ್.ಆರ್.ಪುರ</td><td>1812</td><td>1065</td><td>784</td></tr>
<tr><td>ಚಿಕ್ಕಮಗಳೂರು (ಖಾಂಡ್ಯ ಹೋಬಳಿ)</td><td>203</td><td>188</td><td>15</td></tr>
<tr><td>ಒಟ್ಟು</td><td>4519</td><td>3196</td><td>1414</td></tr>
</table>
<br>ಚುನಾವಣಾ ನೀತಿ ಸಂಹಿತೆ ಜಾರಿ ಹಿನ್ನಲೆಯಲ್ಲಿ ಪಡಿತರ ಚೀಟಿ ವಿಲೇ ಅರ್ಜಿಗಳನ್ನು ಸ್ಥಗಿತಗೊಳಿಸಲಾಗಿತ್ತು. ಈಗ ಪುನಃ ಬಾಕಿ ಅರ್ಜಿಗಳ ವಿಲೇವಾರಿ ಕಾರ್ಯವನ್ನು ಆರಂಭಿಸಲಾಗುವುದು.</td></tr>
<tr><td>ಆ)</td><td>ಹಾಗಿದ್ದಲ್ಲಿ, ಅರ್ಹ ಫಲಾನುಭವಿಗಳಿಗೆ ಬಿ.ಪಿ.ಎಲ್ ಪಡಿತರ ಚೀಟಿಯನ್ನು ವಿತರಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ: (ಮಾಹಿತಿ ಒದಗಿಸುವುದು)</td><td>ಚುನಾವಣಾ ನೀತಿ ಸಂಹಿತೆ ಜಾರಿ ಹಿನ್ನಲೆಯಲ್ಲಿ ಪಡಿತರ ಚೀಟಿ ವಿಲೇ ಅರ್ಜಿಗಳನ್ನು ಸ್ಥಗಿತಗೊಳಿಸಲಾಗಿತ್ತು. ಈಗ ಪುನಃ ಬಾಕಿ ಅರ್ಜಿಗಳ ವಿಲೇವಾರಿ ಕಾರ್ಯವನ್ನು ಆರಂಭಿಸಲಾಗುವುದು.</td></tr>
<tr><td>ಇ)</td><td>ಕಳೆದ ಮೂರು ವರ್ಷಗಳಿಂದ ಅರ್ಹ ಫಲಾನುಭವಿಗಳಿಗೆ ವಿತರಣೆಯಾಗಿರುವ ಬಿ.ಪಿ.ಎಲ್. ಪಡಿತರ ಚೀಟಿಗಳ ಸಂಖ್ಯೆ ಎಷ್ಟು ? (ಮಾಹಿತಿ ಒದಗಿಸುವುದು)</td><td>ಶೃಂಗೇರಿ ವಿಧಾನಸಭಾ ಕ್ಷೇತ್ರದಲ್ಲಿ ವಿತರಿಸಲಾದ ಪಡಿತರ ಚೀಟಿ ವಿವರ:
<table>
<tr><th>ತಾಲ್ಲೂಕು</th><th>ವಿತರಿಸಿದ ಪಡಿತರ ಚೀಟಿ</th></tr>
<tr><td>ಶೃಂಗೇರಿ</td><td>597</td></tr>
<tr><td>ಕೊಪ್ಪ–</td><td>1346</td></tr>
<tr><td>ಎನ್.ಆರ್.ಪುರ</td><td>1065</td></tr>
<tr><td>ಚಿಕ್ಕಮಗಳೂರು(ಖಾಂಡ್ಯ ಹೋಬಳಿ)</td><td>188</td></tr>
<tr><td>ಒಟ್ಟು</td><td>3196</td></tr>
</table></td></tr>
</table>

ಆನಾಸ 162 ಡಿಆರ್ಎ 2018

(ಬಿ. ಜೆಡ್. ಜಮೀರ್ ಅಹ್ಮದ್ ಖಾನ್)
ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ, ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು
ವಕ್ಫ್ ಹಾಗೂ ಹಜ್ ಇಲಾಖಾ ಸಚಿವರು

# ಕರ್ನಾಟಕ ವಿಧಾನ ಸಭೆ

ಸದಸ್ಯರ ಹೆಸರು : ಶ್ರೀ ಎಸ್.ಎನ್.ಸುಬ್ಬಾರೆಡ್ಡಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 341

ಉತ್ತರಿಸಬೇಕಾದ ದಿನಾಂಕ : 11.07.2018

ಉತ್ತರಿಸುವ ಸಚಿವರು : ಪೌರಾಡಳಿತ, ಸ್ಥಳೀಯ ಸಂಸ್ಥೆಗಳು ಹಾಗೂ ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಗರ ಸ್ಥಳೀಯ ಸಂಸ್ಥೆಗಳಲ್ಲಿ ಖಾತಾ ವರ್ಗಾವಣೆ ಮಾಡಲು ಸಕ್ಷಮ ಪ್ರಾಧಿಕಾರದಿಂದ ವಿನ್ಯಾಸ ನಕ್ಷೆ ಮತ್ತು ಭೂ ಪರಿವರ್ತನೆ ಪ್ರತಿಯನ್ನು ನೀಡುವುದು ಕಡ್ಡಾಯ ಮಾಡಿರುವುದು ನಿಜವೇ ; ಐತಕ್ಕಾಗಿ ಈ ನಿಯಮ ಜಾರಿಗೆ ತರಲಾಗಿದೆ ; | ಭೂ ಪರಿವರ್ತಿಸದ ಜಮೀನುಗಳಿಗೆ ವಿನ್ಯಾಸ ಅನುಮೋದನೆ ಪಡೆಯದೇ ಅನಧಿಕೃತ ಬಡಾವಣೆ/ ರೆವಿನ್ಯೂ ಬಡಾವಣೆಗಳನ್ನು ನಿರ್ಮಾಣ ಮಾಡಿ ನಿವೇಶನಗಳನ್ನು ನೋಂದಣಿ ಮಾಡಿಕೊಂಡು ಕಟ್ಟಡಗಳನ್ನು ಅಕ್ರಮವಾಗಿ ನಿರ್ಮಿಸುವುದರಿಂದ ಸಾರ್ವಜನಿಕರಿಗೆ ಮತ್ತು ಯೋಜಿತ ಬೆಳವಣಿಗೆಗಳಿಗೆ ಪ್ರತಿಕೂಲ ಪರಿಣಾಮಗಳು ಉಂಟಾಗುತ್ತದೆ. ಈ ರೀತಿ ಭೂ ಪರಿವರ್ತನೆಯಾಗದ ಮತ್ತು ವಿನ್ಯಾಸ ಅನುಮೋದನೆಯಾಗದ ನಿವೇಶನಗಳಿಗೆ ಸ್ಥಳೀಯ ಸಂಸ್ಥೆಗಳು ನಿಯಮಬಾಹಿರವಾಗಿ ಖಾತಾ ನೀಡುತ್ತಿರುವ ಬಗ್ಗೆ ಸರ್ಕಾರದ ಹಂತದಲ್ಲಿ ಹಲವಾರು ದೂರುಗಳು ಸ್ವೀಕೃತವಾದ್ದರಿಂದ, ಇದನ್ನು ತಡೆಗಟ್ಟಲು ದಿನಾಂಕ 22.03.2017ರ ಸರ್ಕಾರದ ಸುತ್ತೋಲೆಯಲ್ಲಿ ಪ್ರಾಧಿಕಾರದಿಂದ ವಿನ್ಯಾಸ ಅನುಮೋದನೆ ಪಡೆಯದೇ ಇರುವ ನಿವೇಶನಗಳಿಗೆ ಖಾತೆ ನೀಡಬಾರದೆಂದು ಸೂಚಿಸಲಾಗಿದೆ. ಹಾಗೂ ಪೌರಾಡಳಿತ ನಿರ್ದೇಶನಾಲಯದ ದಿನಾಂಕ 05.01.2018 ರ ಸುತ್ತೋಲೆಯಲ್ಲಿ ನಿಯಮ ಬಾಹಿರ ಖಾತಾ ವರ್ಗಾವಣೆಗಳನ್ನು ಗುರುತಿಸಿ ರದ್ದು ಪಡಿಸಲು ಸೂಚಿಸಲಾಗಿದೆ. |
| ಆ | ಈಗಾಗಲೇ ನಗರ ಸ್ಥಳೀಯ ಸಂಸ್ಥೆಗಳ ವ್ಯಾಪ್ತಿಯಲ್ಲಿ ಸುಮಾರು ವರ್ಷಗಳ ಹಿಂದಿನಿಂದ ಇರುವ ಕಟ್ಟಡಗಳು, ನಿವೇಶನಗಳಿಗೆ ಖಾತೆ ಇದ್ದು ಸದರಿ ಆಸ್ತಿಯನ್ನು ಮಾರಾಟ ಅಥವಾ ವರ್ಗಾವಣೆ ಮಾಡಲು ಈ ನಿಯಮದಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಸುತ್ತೋಲೆಯಲ್ಲಿನ ನಿರ್ದೇಶನಗಳನ್ನು ಪಾಲಿಸುವಲ್ಲಿ ಸಮಸ್ಯೆಗಳನ್ನು ವಿವರಿಸಿ ಮನವಿಗಳು ಸ್ವೀಕೃತವಾಗಿವೆ. |

| | | |
|---|---|---|
| ಇ | ಸುಮಾರು 30 ರಿಂದ 40 ವರ್ಷಗಳ ಹಿಂದೆ ಸ್ಥಳೀಯ ಯೋಜನಾ ಪ್ರಾಧಿಕಾರಗಳು ಇಲ್ಲದೇ ಇರುವ ಸಂದರ್ಭದಲ್ಲಿ ನಿರ್ಮಿಸಿದ ಕಟ್ಟಡಗಳಿಗೆ ಈ ನಿಯಮ ಕಡ್ಡಾಯಗೊಳಿಸಿರುವುದು ಸೂಕ್ತವೇ; | ಕರ್ನಾಟಕ ಪುರಸಭೆಗಳ ಕಾಯ್ದೆ, 1964ರ ಕಲಂ 387 ದಿನಾಂಕ 08.12.1976ರಲ್ಲಿ ಜಾರಿಗೆ ಬಂದಿದ್ದು, ಈ ಕೆಳಕಂಡಂತೆ ಇರುತ್ತದೆ;<br><br>387.– **ಯೋಜನಾ ಪ್ರಾಧಿಕಾರದೊಂದಿಗೆ ಸಮಾಲೋಚನೆ:–** ಮುನ್ಸಿಪಲ್ ಕೌನ್ಸಿಲು, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮದ ಮೇರೆಗೆ ಯೋಜನಾ ಪ್ರಾಧಿಕಾರವನ್ನು ರಚಿಸದೆ ಇರುವ ಸ್ಥಳಗಳಲ್ಲಿ, ಪಟ್ಟಣ ಯೋಜನೆಗೆ ಸಂಬಂಧಿಸಿದ ವಿಷಯಗಳಲ್ಲಿ ಅತಿ ಸಮೀಪದ ಯೋಜನಾ ಪ್ರಾಧಿಕಾರದೊಡನೆ ಸಮಾಲೋಚಿಸತಕ್ಕದ್ದು.<br><br>ಅದರಂತೆ ಯೋಜನಾ – ಪ್ರಾಧಿಕಾರಗಳು ಸ್ಥಾಪನೆಯಾಗದ ಪ್ರದೇಶಗಳಲ್ಲಿಯೂ ಸಹ ದಿನಾಂಕ 08.12.1976ರ ನಂತರದಲ್ಲಿ ಅತಿ ಸಮೀಪದ ಯೋಜನಾ ಪ್ರಾಧಿಕಾರದಿಂದ ವಿನ್ಯಾಸ ಅನುಮೋದನೆ ಪಡೆದುಕೊಳ್ಳಬೇಕಾಗಿರುವುದರಿಂದ ಮತ್ತು ಈ ರೀತಿ ಅನುಮೋದನೆ ಪಡೆಯದೇ ಅನಧಿಕೃತವಾಗಿ ಬಡಾವಣೆಗಳನ್ನು / ಕಟ್ಟಡಗಳನ್ನು ನಿರ್ಮಿಸಿರುವುದರಿಂದ ಯೋಜಿತ ಬೆಳವಣಿಗೆಗಳಿಗೆ ಪ್ರತಿಕೂಲ ಪರಿಣಾಮ ಬೀರುವುದರಿಂದ ಇದನ್ನು ತಡೆಗಟ್ಟುವ ನಿಟ್ಟಿನಲ್ಲಿ ಸುತ್ತೋಲೆಯನ್ನು ಹೊರಡಿಸಲಾಗಿದೆ. |
| ಈ | ಈ ನಿಯಮಗಳಿಂದ ಸ್ಥಳೀಯ ಆಸ್ತಿ ತೆರಿಗೆ ವಸೂಲಾತಿ ಕಡಿಮೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಕರ್ನಾಟಕ ಪುರಸಭೆಗಳ ಕಾಯ್ದೆ, 1964ರ ಕಲಂ.107 ರಲ್ಲಿ ಕಾನೂನು ಬಾಹಿರ ಕಟ್ಟಡದ ಮೇಲೆ ದಂಡ ವಿಧಿಸುವ ಬಗ್ಗೆ ಸೂಚಿಸಲಾಗಿರುತ್ತದೆ. ಅದರಂತೆ ಅನಧಿಕೃತ ಕಟ್ಟಡಗಳ ಮೇಲೆ ವಿಧಿಸತಕ್ಕ ಸ್ವತ್ತು ತೆರಿಗೆಯ ಎರಡರಷ್ಟಕ್ಕೆ ಸಮನಾದ ದಂಡವನ್ನು ವಸೂಲಾತಿ ಮಾಡಲಾಗುವುದರಿಂದ ಆಸ್ತಿ ತೆರಿಗೆಯ ವಸೂಲಾತಿಯಲ್ಲಿ ಕಡಿಮೆಯಾಗುವುದಿಲ್ಲ. |
| ಉ | ಬಂದಿದ್ದಲ್ಲಿ ಈ ನಿಯಮಗಳಿಂದ ಸಾರ್ವಜನಿಕರಿಗೆ ಆಗುತ್ತಿರುವ ತೊಂದರೆಗಳನ್ನು ಪರಿಹರಿಸಲು ಯಾವ ಕ್ರಮ ಕೈಗೊಳ್ಳಲಾಗುವುದು? | |

ನಅಇ 250 ಮೈಅಪ್ರಾ 2018

(ರಮೇಶ್ ಲ. ಜಾರಕಿಹೊಳಿ)
ಪೌರಾಡಳಿತ ಮತ್ತು ಸ್ಥಳೀಯ ಸಂಸ್ಥೆಗಳು, ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 456
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್
ಉತ್ತರಿಸಬೇಕಾದ ದಿನಾಂಕ : 11.07.2018

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾಗವಾಡ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಕೃಷಿ ಪತ್ತಿನ ಸಹಕಾರಿ ಬ್ಯಾಂಕುಗಳೆಷ್ಟು? (ಮಾಹಿತಿ ನೀಡುವುದು) | ಕಾಗವಾಡ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಒಟ್ಟು 46 ಕೃಷಿ ಪತ್ತಿನ ಸಹಕಾರ ಸಂಘಗಳು ಇರುತ್ತವೆ ವಿವರವಾದ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಆ) | ಸದರಿ ಬ್ಯಾಂಕಿನ ಶಾಖೆಗಳು ಸ್ವಂತ ಕಟ್ಟಡಗಳನ್ನು ಹೊಂದಿವೆಯೇ? ಎಷ್ಟು ಶಾಖೆಗಳು ಸ್ವಂತ ಕಟ್ಟಡದಲ್ಲಿ ಹಾಗೂ ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ? | 46 ಕೃಷಿ ಪತ್ತಿನ ಸಹಕಾರ ಸಂಘಗಳ ಪೈಕಿ 31 ಸಂಘಗಳು ಸ್ವಂತ ಕಟ್ಟಡಗಳನ್ನು ಹೊಂದಿರುತ್ತವೆ ಹಾಗೂ 15 ಸಂಘಗಳು ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. |
| ಇ) | ಬಾಡಿಗೆ ಕಟ್ಟಡಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಶಾಖೆಗಳಿಗೆ ಸ್ವಂತ ಕಟ್ಟಡ ಒದಗಿಸಲು ಸರ್ಕಾರ ಕ್ರಮ ಕೈಗೊಳ್ಳುವುದೆ? | 2018-19ನೇ ಸಾಲಿನಲ್ಲಿ ಸಹಕಾರ ಸಂಘಗಳ ಕಟ್ಟಡ ನಿರ್ಮಾಣಕ್ಕೆ ಆಯವ್ಯಯ ಅವಕಾಶ ಒದಗಿಸಿಲ್ಲದಿರುವುದರಿಂದ ಸರ್ಕಾರದಿಂದ ಯಾವುದೇ ಕ್ರಮವಿರವುದಿಲ್ಲ. |
| ಈ) | ಹಾಗಿದ್ದಲ್ಲಿ ಯಾವ ಕಾಲಮಿತಿಯಲ್ಲಿ ಕಟ್ಟಡಗಳನ್ನು ಒದಗಿಸಲಾಗುವುದು? (ಮಾಹಿತಿ ನೀಡುವುದು) | |

ಸಂಖ್ಯೆ: ಸಿಒ 125 ಸಿಎಲ್ಎಸ್ 2018

(ಬಂಡೆಪ್ಪ ಖಾಶೆಂಪೂರ)
ಸಹಕಾರ ಸಚಿವರು.

ಅನುಬಂಧ

# ಕಾಗವಾಡ ವಿಧಾನಸಭಾ ಮತಕ್ಷೇತ್ರದಲ್ಲಿ ಸ್ವಂತ ಕಟ್ಟಡ ಹಾಗೂ ಬಾಡಿಗೆ ಕಟ್ಟಡದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳ ವಿವರ

| ಸ್ವಂತ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಘಗಳು | | |
|---|---|---|
| ಕ್ರ.ಸಂ | ಸಹಕಾರ ಸಂಘದ ಹೆಸರು | ಸ್ವಂತ ಕಟ್ಟಡ/ ಬಾಡಿಗೆ ಕಟ್ಟಡ |
| 1 | ಅನಂತಪೂರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅನಂತಪೂರ | ಸ್ವಂತ ಕಟ್ಟಡ |
| 2 | ಖಿಳೆಗಾಂವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., | ಸ್ವಂತ ಕಟ್ಟಡ |
| 3 | ಐನಾಪೂರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಐನಾಪೂರ | ಸ್ವಂತ ಕಟ್ಟಡ |
| 4 | ಕಾಗವಾಡ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಾಗವಾಡ | ಸ್ವಂತ ಕಟ್ಟಡ |
| 5 | ಮದಬಾಂವಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮದಬಾಂವಿ | ಸ್ವಂತ ಕಟ್ಟಡ |
| 6 | ಮುಳವಾಡ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮೂಳವಾಡ | ಸ್ವಂತ ಕಟ್ಟಡ |
| 7 | ಅಜೂರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅಜೂರ | ಸ್ವಂತ ಕಟ್ಟಡ |
| 8 | ಜಂಬಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಜಂಬಗಿ | ಸ್ವಂತ ಕಟ್ಟಡ |
| 9 | ಜುಗುಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಜುಗಳ | ಸ್ವಂತ ಕಟ್ಟಡ |
| 10 | ಕಿರಣಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಿರಣಗಿ | ಸ್ವಂತ ಕಟ್ಟಡ |
| 11 | ಮೋಳೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮೋಳೆ | ಸ್ವಂತ ಕಟ್ಟಡ |
| 12 | ಕೆಂಪವಾಡ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕೆಂಪವಾಡ | ಸ್ವಂತ ಕಟ್ಟಡ |
| 13 | ಸಂಬರಗಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಸಂಬರಗಿ | ಸ್ವಂತ ಕಟ್ಟಡ |
| 14 | ಶೇಡಬಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಶೇಡಬಾಳ | ಸ್ವಂತ ಕಟ್ಟಡ |
| 15 | ಉಗಾರ ಬಿ.ಕೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಉಗಾರ. ಬಿ.ಕೆ. | ಸ್ವಂತ ಕಟ್ಟಡ |
| 16 | ಶಿರೂರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಶಿರೂರ | ಸ್ವಂತ ಕಟ್ಟಡ |
| 17 | ತಾಂವಶಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ತಾಂವಶಿ | ಸ್ವಂತ ಕಟ್ಟಡ |
| 18 | ಅರಳಿಹಟ್ಟಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅರಳಿಹಟ್ಟಿ | ಸ್ವಂತ ಕಟ್ಟಡ |
| 19 | ಪಾರ್ಥನಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಪಾರ್ಥನಳ್ಳಿ | ಸ್ವಂತ ಕಟ್ಟಡ |
| 20 | ಮಂಗಸೂಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮಂಗಸೂಳಿ | ಸ್ವಂತ ಕಟ್ಟಡ |
| 21 | ಕುಸನಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕುಸನಾಳ | ಸ್ವಂತ ಕಟ್ಟಡ |
| 22 | ಉಗಾರ ಕೆ.ಎಚ್. ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಉಗಾರ ಕೆ.ಎಚ್. | ಸ್ವಂತ ಕಟ್ಟಡ |
| 23 | ಅಶೋಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ ಮಂಗಸೂಳಿ | ಸ್ವಂತ ಕಟ್ಟಡ |
| 24 | ಶಿರಗುಪ್ಪಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ. ಶಿರಗುಪ್ಪಿ | ಸ್ವಂತ ಕಟ್ಟಡ |
| 25 | ಜಮಕೇರಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ ಜಮಕೇರಿ. | ಸ್ವಂತ ಕಟ್ಟಡ |
| 26 | ಗುಂಡೆವಾಡಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ ಗುಂಡೆವಾಡಿ | ಸ್ವಂತ ಕಟ್ಟಡ |

| | | |
|---|---|---|
| 27 | ಮಂಗಾವತಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಮಂಗಾವತಿ | ಸ್ವಂತ ಕಟ್ಟಡ |
| 28 | ಮಲಬಾದ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ., ಮಲಬಾದ | ಸ್ವಂತ ಕಟ್ಟಡ |
| 29 | ಕೃಷ್ಣಾ ಕಿತ್ತೂರ ವ್ಯವಸಾಯ ಸೇವಾ. ಸಹಕಾರಿ. ಸಂಘ. ಕೃಷ್ಣಾ ಕಿತ್ತೂರ | ಸ್ವಂತ ಕಟ್ಟಡ |
| 30 | ಲೋಕೂರ ಪ್ರಾ.ಥಮಿಕ ಕೃಷಿ ಪತ್ತಿನ ಸಹಕಾರ ಸಂಘನಿ ಲೋಕೂರ | ಸ್ವಂತ ಕಟ್ಟಡ |
| 31 | ಪ್ರಾ.ಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಶಿವನೂರ | ಸ್ವಂತ ಕಟ್ಟಡ |
| ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿರುವ ಕೃಷಿ ಪತ್ತಿನ ಸಹಕಾರ ಸಂಘಗಳು | | |
| 32 | ಪ್ರಾ.ಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ ಬಾಳಿಗೇರಿ | ಬಾಡಿಗೆ ಕಟ್ಟಡ |
| 33 | ಬೇವನೂರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ.,. ಬೇವನೂರ | ಬಾಡಿಗೆ ಕಟ್ಟಡ |
| 34 | ಬಸವೇಶ್ವರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ.,. ಶೇಡಬಾಳ ಸ್ಟೇಷನ್ (ಕಲ್ಲಾಳ) | ಬಾಡಿಗೆ ಕಟ್ಟಡ |
| 35 | ಅಭಿಹಾಳ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ.,. ಅಭಿಹಾಳ | ಬಾಡಿಗೆ ಕಟ್ಟಡ |
| 36 | ಲೋಕನಾಥ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ.,. ಲೋಕುರ | ಬಾಡಿಗೆ ಕಟ್ಟಡ |
| 37 | ಸಿದ್ದೇವಾಡಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘ ನಿ.,, ಸಿದ್ದೇವಾಡಿ | ಬಾಡಿಗೆ ಕಟ್ಟಡ |
| 38 | ಶ್ರೀ ಬಸವೇಶ್ವರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅನಂತಪೂರ ತಾ: ಅಥಣಿ | ಬಾಡಿಗೆ ಕಟ್ಟಡ |
| 39 | ಕರಿಕಧ್ದಿ ತೋಟ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ.,ಶಿವನೂರ | ಬಾಡಿಗೆ ಕಟ್ಟಡ |
| 40 | ಕಿತ್ತೂರ ರಾಣಿ ಚನ್ನಮ್ಮಾ ಮಹಿಳಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮದಭಾಂವಿ | ಬಾಡಿಗೆ ಕಟ್ಟಡ |
| 41 | ಶ್ರೀ ಸಿದ್ದೇಶ್ವರ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಐನಾಪೂರ ತಾ: ಅಥಣಿ | ಬಾಡಿಗೆ ಕಟ್ಟಡ |
| 42 | ಸಾಹಾರಾ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಪಾರ್ಥನಹಳ್ಳಿ ತಾ: ಅಥಣಿ | ಬಾಡಿಗೆ ಕಟ್ಟಡ |
| 43 | ಕರ್ನಾಟಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಕೃಷ್ಣಾ ಕಿತ್ತೂರ ತಾ: ಅಥಣಿ | ಬಾಡಿಗೆ ಕಟ್ಟಡ |
| 44 | ಜೈ ಹನುಮಾನ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ.,ಅಗ್ರಾಣಿ ಇಂಗಳಗಾಂವ ತಾ:ಅಥಣಿ | ಬಾಡಿಗೆ ಕಟ್ಟಡ |
| 45 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಪಾಂಡೇಗಾಂವ | ಬಾಡಿಗೆ ಕಟ್ಟಡ |
| 46 | ಜೈ ಹನುಮಾನ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮದಭಾಂವಿ ತಾ: ಅಥಣಿ | ಬಾಡಿಗೆ ಕಟ್ಟಡ |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 30
2. ವಿಧಾನ ಸಭಾ ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ (ಮಡಿಕೇರಿ)
3. ಉತ್ತರಿಸುವ ದಿನಾಂಕ : 11-07-2018
4. ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆ, ಸೋಮವಾರಪೇಟೆಯ ಅಗ್ನಿಶಾಮಕ ಠಾಣೆ ಎಷ್ಟು ವರ್ಷಗಳಿಂದ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ? | ಕಳೆದ 07 ವರ್ಷಗಳಿಂದ ಬಾಡಿಗೆ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದೆ. |
| ಆ) | ಸೋಮವಾರಪೇಟೆಯಲ್ಲಿ ಅಗ್ನಿಶಾಮಕ ಠಾಣೆಗೆ ಸೇರಿದ ಸ್ವಂತ ಜಾಗವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಹಾಗಿದ್ದಲ್ಲಿ ಕಟ್ಟಡ ನಿರ್ಮಾಣಕ್ಕೆ ಎಷ್ಟು ಅನುದಾನ ಮೀಸಲಿಡಲಾಗಿದೆ; ಯಾವಾಗ ಕಾಮಗಾರಿ ಕೈಗೊಳ್ಳಲಾಗುವುದು? (ಪೂರ್ಣ ವಿವರ ನೀಡುವುದು) | ಹೌದು.<br>ಅಗ್ನಿಶಾಮಕ ಮತ್ತು ತುರ್ತು ಸೇವೆಗಳ ಇಲಾಖೆಯ ಸಮಗ್ರ ಅಭಿವೃದ್ಧಿ ಯೋಜನೆಗೆ ಸಂಬಂಧಪಟ್ಟಂತೆ ಕೆ-ಸೇಫ್-2 ಯೋಜನೆಯನ್ನು ಪ್ರಾರಂಭಿಸಲು ಉದ್ದೇಶಿಸಿದ್ದು, ಇದರಲ್ಲಿ ಸೋಮವಾರಪೇಟೆ ಅಗ್ನಿಶಾಮಕ ಠಾಣೆಯು ಸೇರ್ಪಡೆಯಾಗಿದೆ. ಅನುದಾನದ ಲಭ್ಯತೆಯ ಮೇರೆಗೆ ಅಗ್ನಿಶಾಮಕ ಠಾಣೆ ಕಟ್ಟಡ ನಿರ್ಮಿಸಲು ಕ್ರಮಕೈಗೊಳ್ಳಲಾಗುವುದು. |

ಸಂಖ್ಯೆ: ಒಇ 133 ಕಅಸೇ 2018

(ಡಾ॥ ಜಿ.ಪರಮೇಶ್ವರ)
ಉಪ ಮುಖ್ಯಮಂತ್ರಿಗಳು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **343**
**ಉತ್ತರಿಸುವ ದಿನಾಂಕ** : **11.07.2018.**
**ಸದಸ್ಯರ ಹೆಸರು** : **ಶ್ರೀ ಯಶವಂತರಾಯಗೌಡ ವಿಠಲ್‌ಗೌಡ ಪಾಟೀಲ್(ಇಂಡಿ)**
**ಉತ್ತರಿಸುವ ಸಚಿವರು** : **ಮಾನ್ಯ ಉಪ ಮುಖ್ಯಮಂತ್ರಿಯವರು**

<table>
<tr><th>ಕ್ರಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>2015-16ನೇ ಸಾಲಿನಿಂದ 2017-18ನೇ ಸಾಲಿನವರೆಗೆ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಇಂಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಮಂಜೂರಾತಿ ನೀಡಿರುವ ಹಾಗೂ ನಿರ್ಮಾಣ ಮಾಡಿರುವ ಗರಡಿ ಮನೆಗಳ ಸಂಖ್ಯೆ ಎಷ್ಟು; ಅವು ಯಾವುವು; (ವಿವರ ನೀಡುವುದು)</td><td>2015-16ನೇ ಸಾಲಿನಿಂದ 2017-18ನೇ ಸಾಲಿನವರೆಗೆ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆಯಿಂದ ಇಂಡಿ ವಿಧಾನಸಭಾ ಕ್ಷೇತ್ರಕ್ಕೆ ಒಟ್ಟು 06 ಗರಡಿ ಮನೆಗಳನ್ನು ಮಂಜೂರು ಮಾಡಲಾಗಿದೆ. ವಿವರ ಇಂತಿದೆ.<br>1. ಇಂಡಿ ತಾಲ್ಲೂಕು ಕ್ರೀಡಾಂಗಣ<br>2. ಹಲಸಂಗಿ ಗ್ರಾಮ<br>3. ಲಚ್ಯಾಣ ಗ್ರಾಮ<br>4. ಶಿರಿಕನಹಳ್ಳಿ ಗ್ರಾಮ<br>5. ಆಳೂರು ಗ್ರಾಮ<br>6. ಗೊರನಾಳ ಗ್ರಾಮ</td></tr>
<tr><td>ಆ</td><td>ಸದರಿ ಗರಡಿ ಮನೆಗಳ ನಿರ್ಮಾಣಕ್ಕೆ ಮಂಜೂರಾದ ಅನುದಾನ ಎಷ್ಟು; ಈ ಭವನಗಳ ಕಾಮಗಾರಿಗಳು ಪ್ರಸ್ತುತ ಯಾವ ಹಂತದಲ್ಲಿವೆ; (ವಿವರ ನೀಡುವುದು)</td><td>ಸದರಿ ಗರಡಿ ಮನೆಗಳ ನಿರ್ಮಾಣಕ್ಕೆ ಮಂಜೂರಾದ ಅನುದಾನದ ವಿವರ ಇಂತಿದೆ.
<table>
<tr><th>ಕ್ರ. ಸಂ</th><th>ಗ್ರಾಮದ ಹೆಸರು</th><th>ಮಂಜೂರಾದ ಅನುದಾನ (ರೂ ಲಕ್ಷಗಳಲ್ಲಿ)</th><th>ಪ್ರಸ್ತುತ ಹಂತ</th></tr>
<tr><td>1</td><td>ಇಂಡಿ ತಾಲ್ಲೂಕು ಕ್ರೀಡಾಂಗಣ</td><td>5.00</td><td>ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ.</td></tr>
<tr><td>2</td><td>ಹಲಸಂಗಿ ಗ್ರಾಮ</td><td>5.00</td><td rowspan="2">ಕಾಮಗಾರಿ ಪ್ರಗತಿಯಲ್ಲಿದೆ.</td></tr>
<tr><td>3</td><td>ಲಚ್ಯಾಣ ಗ್ರಾಮ</td><td>5.00</td></tr>
<tr><td>4</td><td>ಶಿರಿಕನಹಳ್ಳಿ ಗ್ರಾಮ</td><td>5.00</td><td rowspan="2">ಕಾಮಗಾರಿ ಪೂರ್ಣಗೊಂಡಿದೆ.</td></tr>
<tr><td>5</td><td>ಆಳೂರು ಗ್ರಾಮ</td><td>5.00</td></tr>
<tr><td>6</td><td>ಗೊರನಾಳ ಗ್ರಾಮ</td><td>10.00</td><td>ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿದೆ.</td></tr>
</table></td></tr>
<tr><td>ಇ</td><td>ಸದರಿ ಕಾಮಗಾರಿಗಳನ್ನು ಯಾವ ಕಾಲಮಿತಿಯೊಳಗೆ ಸಂಪೂರ್ಣಗೊಳಿಸಲಾಗುವುದು;</td><td>2018-19ನೇ ಸಾಲಿನಲ್ಲಿ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುವುದು.</td></tr>
<tr><td>ಈ</td><td>ಇಂಡಿ ವಿಧಾನ ಸಭಾ ಕ್ಷೇತ್ರದ ಗಡಿಭಾಗದಲ್ಲಿ ಬರುವ ಗ್ರಾಮಗಳಲ್ಲಿ ಗರಡಿ ಮನೆಗಳು ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.</td></tr>
</table>

| | | |
|---|---|---|
| ಉ | ಬಂದಿದ್ದಲ್ಲಿ; ಪ್ರಸಕ್ತ ಸಾಲಿನಲ್ಲಿ ಯಾವ ಯಾವ ಸ್ಥಳಗಳಲ್ಲಿ ಗರಡಿ ಮನೆಗಳನ್ನು ನಿರ್ಮಾಣ ಮಾಡಲು ಎಷ್ಟು ಅನುದಾನದೊಂದಿಗೆ ಮಂಜೂರಾತಿ ನೀಡಲಾಗುವುದು? (ವಿವರ ನೀಡುವುದು) | ಗರಡಿ ಮನೆಗಳನ್ನು ಹೊಸದಾಗಿ ನಿರ್ಮಿಸಲು ತಲಾ ರೂ.10.00 ಲಕ್ಷ ಹಾಗೂ ಗರಡಿ ಮನೆಗಳ ಪುನರುಜ್ಜೀವನಕ್ಕಾಗಿ ತಲಾ ರೂ.2.00 ಲಕ್ಷ ನಿಗಧಿಪಡಿಸಲಾಗಿದ್ದು, ಈ ಬಗ್ಗೆ 2018-19 ನೇ ಸಾಲಿನಲ್ಲಿ ಒಟ್ಟು ರೂ.260.00 ಲಕ್ಷ ಹಂಚಿಕೆ ಮಾಡಲಾಗಿದೆ. ಹೊಸ ಗರಡಿ ಮನೆಗಳನ್ನು ನಿರ್ಮಿಸಲು ಇಂಡಿ ವಿಧಾನ ಸಭಾ ಕ್ಷೇತ್ರದ 11 ಪ್ರಸ್ತಾವನೆಗಳು ಸೇರಿದಂತೆ ಒಟ್ಟು 511 ಹಾಗೂ ಗರಡಿ ಮನೆಗಳ ಪುನರುಜ್ಜೀವನಕ್ಕಾಗಿ 78 ಪ್ರಸ್ತಾವನೆಗಳನ್ನು ರಾಜ್ಯದ ವಿವಿಧ ಭಾಗಗಳಿಂದ ಸ್ವೀಕರಿಸಲಾಗಿದ್ದು, ಅನುದಾನದ ಲಭ್ಯತೆ ಆಧರಿಸಿ, ಆದ್ಯತೆಯ ಮೇಲೆ ಇಂಡಿ ವಿಧಾನ ಸಭಾ ಕ್ಷೇತ್ರದ ಗಡಿ ಭಾಗದಲ್ಲಿ ಗರಡಿ ಮನೆಗಳ ನಿರ್ಮಾಣ ಹಾಗೂ ಪುನರುಜ್ಜೀವನಕ್ಕಾಗಿ ಕ್ರಮ ಜರುಗಿಸಲಾಗುವುದು. |

**ಸಂಖ್ಯೆ: ಯುಸೇಇ 58 ಯುಸೇಭಾ 2018.**

(ಡಾ॥ ಜಿ. ಪರಮೇಶ್ವರ)
ಮಾನ್ಯ ಉಪ ಮುಖ್ಯಮಂತ್ರಿಗಳು

# ಕರ್ನಾಟಕ ವಿಧಾನಸಭೆ

1] ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 31
2] ಸದಸ್ಯರ ಹೆಸರು : ಶ್ರೀ ಅಪ್ಪಚ್ಚು (ರಂಜನ್) ಎಂ.ಪಿ
: (ಮಡಿಕೇರಿ)
3] ಉತ್ತರಿಸುವ ದಿನಾಂಕ : 11.07.2018
4] ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿ

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿರುವ ಪೊಲೀಸ್ ಇಲಾಖೆಯ ವಸತಿ ಗೃಹಗಳು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಬಂದಿದ್ದಲ್ಲಿ, ಅವುಗಳ ದುರಸ್ಥಿಗೆ ಸರ್ಕಾರ ತೆಗೆದುಕೊಂಡ ಕ್ರಮಗಳು ಯಾವುವು; | ಕೊಡಗು ಜಿಲ್ಲೆಯ ಪೊಲೀಸ್ ವಸತಿ ಗೃಹಗಳ ದುರಸ್ಥಿಗಾಗಿ ಕಳೆದ ಮೂರು ವರ್ಷಗಳಲ್ಲಿ ಕೆಳಕಂಡಂತೆ ಅನುದಾನವನ್ನು ನೀಡಲಾಗಿದೆ. (see table below) |
| ಇ) | ಹೊಸದಾಗಿ ಪೊಲೀಸ್ ವಸತಿ ಗೃಹಗಳ ನಿರ್ಮಾಣಕ್ಕೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ; ಇದಕ್ಕಾಗಿ ಬಿಡುಗಡೆಗೊಂಡ ಅನುದಾನ ಎಷ್ಟು; ಖರ್ಚಾದ ಅನುದಾನವೆಷ್ಟು? (ಪೂರ್ಣ ವಿವರ ನೀಡುವುದು) | ರಾಜ್ಯಾದ್ಯಂತ 11000 ವಸತಿ ಗೃಹಗಳನ್ನು ರೂ.2272.37 ಕೋಟಿ ವೆಚ್ಚದಲ್ಲಿ ನಿರ್ಮಿಸಲು ಸರ್ಕಾರವು 'ಪೊಲೀಸ್ ಗೃಹ 2020' ಯೋಜನೆಗೆ ಮಂಜೂರಾತಿ ನೀಡಿದೆ. ಇದುವರೆಗೆ ಈ ಯೋಜನೆಗಾಗಿ ರೂ.1327.44 ಕೋಟಿ ಅನುದಾನವನ್ನು ಬಿಡುಗಡೆ ಮಾಡಿದೆ.<br>ಪೊಲೀಸ್ ಗೃಹ 2020 ಯೋಜನೆಯಡಿ ಕೊಡಗು ಜಿಲ್ಲೆಯಲ್ಲಿ 174 ವಸತಿ ಗೃಹಗಳನ್ನು ರೂ.653.28 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲಾಗಿದೆ. |

| | ವರ್ಷ | ನೀಡಿದ ಅನುದಾನ (ರೂ.ಗಳಲ್ಲಿ) |
|---|---|---|
| 1 | 2015-16 | 1,22,95,000/- |
| 2 | 2016-17 | 56,67,000/- |
| 3 | 2017-18 | 57,35,000/- |

ಹೆಚ್‌ಡಿ 109 ಪಿಬಿಎಲ್ 2018

[ಡಾ॥ ಜಿ.ಪರಮೇಶ್ವರ]
ಉಪ ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1] | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 362 |
| 2] | ಸದಸ್ಯರ ಹೆಸರು | : | ಶ್ರೀ ನಾರಾಯಣಸ್ವಾಮಿ ಎಸ್.ಎನ್ |
| | | : | (ಬಂಗಾರಪೇಟೆ) |
| 3] | ಉತ್ತರಿಸುವ ದಿನಾಂಕ | : | 11.07.2018 |
| 4] | ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿ |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಂಗಾರಪೇಟೆ ತಾಲ್ಲೂಕು ಕೇಂದ್ರದಲ್ಲಿರುವ ಪೊಲೀಸ್ ಠಾಣೆ ಕಟ್ಟಡವನ್ನು ಹೊಸದಾಗಿ ನಿರ್ಮಿಸಲು ಕಳೆದ 5 ವರ್ಷಗಳಿಂದ ಬೇಡಿಕೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂಗಾರಪೇಟೆ ತಾಲ್ಲೂಕು ಕೇಂದ್ರದಲ್ಲಿ ಈಗಿರುವ ಪೊಲೀಸ್ ಠಾಣಾ ಕಟ್ಟಡವನ್ನು ನೆಲಸಮಗೊಳಿಸಿ ಹೊಸ ಪೊಲೀಸ್ ಠಾಣೆಯನ್ನು ನಿರ್ಮಿಸುವ ಅಥವಾ ದುರಸ್ಥಿಗೊಳಿಸುವ ಬಗ್ಗೆ ಪ್ರಸ್ತಾವನೆಯು ಪೊಲೀಸ್ ಇಲಾಖಾ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| ಆ) | ಹಾಗಿದ್ದಲ್ಲಿ, ನೂತನ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | |
| ಇ) | ಬಂಗಾರಪೇಟೆ ಪೊಲೀಸ್ ಠಾಣೆಗೆ ಯಾವ ಕಾಲಮಿತಿಯಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗುವುದು? | ಬಂಗಾರಪೇಟೆ ಪೊಲೀಸ್ ಠಾಣೆಗೆ ಕುಡಿಯುವ ನೀರಿನ ಸೌಲಭ್ಯ ಸಿಬ್ಬಂದಿಗಳಿಗೆ ವಿಶ್ರಾಂತಿ ಕೊಠಡಿ ವಿದ್ಯುಚ್ಛಕ್ತಿ ಶೌಚಾಲಯ ಇತ್ಯಾದಿ ಮೂಲಭೂತ ಸೌಲಭ್ಯಗಳನ್ನು ಒದಗಿಸಲಾಗಿದೆ. ದಿನಾಂಕ:06.03.2018 ರಂದು ಜನಸ್ನೇಹಿ ಪೊಲೀಸ್ ಠಾಣೆಯನ್ನಾಗಿಸಲು ಬೇಕಾಗುವ ಸೌಲಭ್ಯಗಳನ್ನು ಒದಗಿಸಲು ರೂ.1.00 ಲಕ್ಷ ಅನುದಾನವನ್ನು ನೀಡಲಾಗಿದೆ. |

ಹೆಚ್‌ಡಿ 109 ಪಿಬಿಎಲ್ 2018

[ಡಾ॥ ಜಿ.ಪರಮೇಶ್ವರ]
ಉಪ ಮುಖ್ಯಮಂತ್ರಿ

**ಕರ್ನಾಟಕ ವಿಧಾನಸಭೆ**
**15 ನೇ ವಿಧಾನಸಭೆ**
**1ನೇ ಅಧಿವೇಶನ**
**(ಮುಂದುವರೆದ ಉಪವೇಶನಗಳು)**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 459 |
| ಮಾನ್ಯ ಸದಸ್ಯರ ಹೆಸರು | : | ಶ್ರೀ. ಅಂಗಾರ ಎಸ್. (ಸುಳ್ಯ) |
| ಉತ್ತರಿಸುವ ದಿನಾಂಕ | : | 11-07-2018 |
| ಉತ್ತರಿಸುವ ಸಚಿವರು | : | ಲೋಕೋಪಯೋಗಿ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಸಂಪಾಜೆಯಿಂದ ಪೆರ್ನಾಜೆವರೆಗೆ ರಾಜ್ಯ ಹೆದ್ದಾರಿಯ ಪರಂಬೋಕು ಜಮೀನನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಹಾಗೂ ಒತ್ತುವರಿದಾರರ ವಿರುದ್ಧ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ.<br><br>ಆದಾಗ್ಯೂ ಸದರಿ ರಸ್ತೆಯ ಬದಿಯಲ್ಲಿ ಅನಧಿಕೃತ ಕಟ್ಟಡಗಳಿರುವುದು ಕಂಡು ಬಂದಲ್ಲಿ ಅವುಗಳನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಲೋಇ 129 ಇಎಪಿ 2018

(ಹೆಚ್.ಡಿ. ರೇವಣ್ಣ)
ಲೋಕೋಪಯೋಗಿ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 292
ಸದಸ್ಯರ ಹೆಸರು : ಶ್ರೀ . ವಿ. ಸೋಮಣ್ಣ (ಗೋವಿಂದರಾಜ ನಗರ)
ಉತ್ತರಿಸ ಬೇಕಾದ ದಿನಾಂಕ : 11.07.2018
ಉತ್ತರಿಸಬೇಕಾದ ಸಚಿವರು : ಮಾನ್ಯ ಉಪಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಯೋಜನಾ ಸಮಿತಿಯು ಎಂದಿನಿಂದ ಜಾರಿಗೆ ಬಂದಿದೆ; ಸಮಿತಿಯ ಅಧ್ಯಕ್ಷರು ಯಾರು; | ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 356 ಬೆಂಆಸೇ 2005(ಭಾಗ) ದಿನಾಂಕ 04.01.2014 ರಲ್ಲಿ ಪ್ರಕಟಿಸಲಾದ ಬೆಂಗಳೂರು ಮಹಾನಗರ ಯೋಜನಾ ಸಮಿತಿ ನಿಯಮಗಳು 2013ರ ನಿಯಮ 3 ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 356 ಬೆಂಆಸೇ 2005 (ಭಾಗ) ದಿನಾಂಕ:08/01/2014, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 483 ಬೆಂಆಸೇ 2015 ದಿನಾಂಕ 09.03.2016 ಹಾಗೂ 20.06.2017 ರಲ್ಲಿ ಬೆಂಗಳೂರು ಮಹಾನಗರ ಯೋಜನಾ ಸಮಿತಿಯನ್ನು ರಚಿಸಲಾಗಿರುತ್ತದೆ.<br><br>ದಿನಾಂಕ 01/06/2016 ರಂದು ಜರುಗಿದ ಸಮಿತಿಯ ಮೊದಲನೇ ಸಭೆಯಲ್ಲಿ ಮಹಾನಗರ ಯೋಜನಾ ಸಮಿತಿಯ ನಿಯಮಾವಳಿಗಳು 2013ರ ನಿಯಮ 3(2) ರನ್ವಯ ಮಾನ್ಯ ಮುಖ್ಯ ಮಂತ್ರಿಗಳನ್ನು ಸದರಿ ಸಮಿತಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗಿರುತ್ತದೆ. |
| ಆ) | ಸಮಿತಿಯು ಎಷ್ಟು ದಿನಗಳಿಗೊಮ್ಮೆ ಸಭೆಗಳನ್ನು ನಡೆಸುತ್ತದೆ; ಇದುವರೆಗೂ ಎಷ್ಟು ಸಭೆಗಳು ನಡೆದಿವೆ; | ಬೆಂಗಳೂರು ಮಹಾನಗರ ಯೋಜನಾ ಸಮಿತಿ ನಿಯಮಗಳು 2013, ನಿಯಮ 5 (1) ರಂತೆ ಕನಿಷ್ಠ 03 ತಿಂಗಳಿಗೊಮ್ಮೆ ಅಥವಾ ಸಮಿತಿಯ ಅಧ್ಯಕ್ಷರು ನಿರ್ಧರಿಸುವ ವೇಳೆಯಲ್ಲಿ ಸಭೆಯನ್ನು ನಡೆಸಲು ಅವಕಾಶವಿರುತ್ತದೆ. ಇದುವರೆವಿಗೂ ಒಟ್ಟು 03 ಸಭೆಗಳು ನಡೆದಿರುತ್ತವೆ. |
| ಇ) | ಬೆಂಗಳೂರು ಪರಿಷ್ಕೃತ ಯೋಜನೆಯನ್ನು ತಯಾರಿಸಲಾಗಿದೆಯೇ; ಪರಿಷ್ಕೃತ ಬೆಂಗಳೂರು ಯೋಜನಾ ನಕ್ಷೆಯ ಬಗ್ಗೆ (ಸಿಡಿಪಿ) ಬೆಂಗಳೂರು ಯೋಜನಾ ಸಮಿತಿಯ ಜೊತೆ ಚರ್ಚಿಸಲಾಗಿದೆಯೇ? | ಹೌದು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಪರಿಷ್ಕೃತ ಮಹಾಯೋಜನೆ-2031 ನ್ನು ತಯಾರಿಸಲಾಗಿದ್ದು, ಪರಿಷ್ಕೃತ ಮಹಾಯೋಜನೆ-2031ಕ್ಕೆ ದಿನಾಂಕ 22/11/2017 ರಂದು ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿರುತ್ತದೆ.<br><br>ತಾತ್ಕಾಲಿಕ ಅನುಮೋದನೆ ತಯಾರಿಕೆಯ ಸಮಯದಲ್ಲಿ ಮತ್ತು ಸರ್ಕಾರದಿಂದ ತಾತ್ಕಾಲಿಕ ಅನುಮೋದನೆ ಆದ ನಂತರ ಕ್ರಮವಾಗಿ ದಿನಾಂಕ:16.12.2016 ಮತ್ತು 16.01.2018 ರಂದು ನಡೆದ ಬೆಂಗಳೂರು ಮಹಾನಗರ ಯೋಜನಾ ಸಮಿತಿಯ ಸಭೆಗಳಲ್ಲಿ ಪ್ರಾತ್ಯಕ್ಷಿಕೆಯೊಂದಿಗೆ ಚರ್ಚಿಸಲಾಗಿರುತ್ತದೆ. |

ಸಂ: ನಅಇ 204 ಬೆಂಆಸೇ 2018.

(ಡಾ॥ ಜಿ.ಪರಮೇಶ್ವರ)
ಉಪ ಮುಖ್ಯಮಂತ್ರಿ

<u>ಕರ್ನಾಟಕ ವಿಧಾನ ಸಭೆ</u>

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 469

02. ಸದಸ್ಯರ ಹೆಸರು : ಶ್ರೀ ವಿಶ್ವನಾಥ್ ಚಂದ್ರಶೇಖರ್ ಮಾಮನಿ (ಸವದತ್ತಿ ಯಲ್ಲಮ್ಮ)

03. ಉತ್ತರಿಸುವ ದಿನಾಂಕ : 11.07.2018

04. ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸವದತ್ತಿ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ 2 ಪೋಲೀಸ್ ಠಾಣೆಗಳು ಹಾಗೂ 4 ಹೊರ ಠಾಣೆಗಳಿಗೆ ಸರ್ಕಾರದಿಂದ ಮಂಜೂರಾದ ವಿವಿಧ ಹುದ್ದೆಗಳು ಯಾವುವು ಹಾಗೂ ಎಷ್ಟು; (ಠಾಣಾವಾರು ವಿವರ ನೀಡುವುದು) | ಸವದತ್ತಿ ತಾಲ್ಲೂಕು ವ್ಯಾಪ್ತಿಯಲ್ಲಿ ಬರುವ 2 ಪೋಲೀಸ್ ಠಾಣೆಗಳು ಹಾಗೂ 4 ಹೊರ ಠಾಣೆಗಳ ಬಲಾಬಲದ ಮಾಹಿತಿಯು ಈ ಕೆಳಕಂಡಂತಿದೆ. |
| ಆ) | ಇವುಗಳಲ್ಲಿ, ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳು ಎಷ್ಟು; (ವಿವರ ನೀಡುವುದು) | |

| ಕ್ರ ಸಂಖ್ಯೆ | ಠಾಣೆಯ ಹೆಸರು | ಹುದ್ದೆ | ಮಂಜೂರಾತಿ ಬಲ | ಹಾಲಿ ಬಲ | | ರಿಕ್ತ ಸ್ಥಾನ |
|---|---|---|---|---|---|---|
| | | | | ಪುರುಷ | ಮಹಿಳೆ | |
| 1 | ಸವದತ್ತಿ | ಪಿಎಸ್ಐ | 2 | 1 | 0 | 1 |
| | | ಎಎಸ್ಐ | 3 | 2 | 1 | 0 |
| | | ಸಿಹೆಚ್‌ಸಿ | 15 | 14 | 1 | 0 |
| | | ಸಿಪಿಸಿ | 26 | 13 | 6 | 7 |
| 2 | ಮುರಗೋಡ | ಪಿಎಸ್ಐ | 1 | 1 | 0 | 0 |
| | | ಎಎಸ್ಐ | 2 | 2 | 0 | 0 |
| | | ಸಿಹೆಚ್‌ಸಿ | 10 | 9 | 1 | 0 |
| | | ಸಿಪಿಸಿ | 24 | 17 | 1 | 6 |
| 3 | ಮುನ್ನೋಳಿ ಹೊರ ಠಾಣೆ | ಎಎಸ್ಐ | 1 | 1 | 0 | 0 |
| | | ಸಿಹೆಚ್‌ಸಿ | 1 | 1 | 0 | 0 |
| | | ಸಿಪಿಸಿ | 3 | 3 | 0 | 0 |
| 4 | ನವಿಲು ತೀರ್ಥ ಹೊರ ಠಾಣೆ | ಎಎಸ್ಐ | 1 | 1 | 0 | 0 |
| | | ಸಿಹೆಚ್‌ಸಿ | 1 | 1 | 0 | 0 |
| | | ಸಿಪಿಸಿ | 2 | 0 | 0 | 2 |
| 5 | ಯಲ್ಲಮ್ಮಾ ಹೊರ ಠಾಣೆ | ಎಎಸ್ಐ | 1 | 1 | 0 | 0 |
| | | ಸಿಹೆಚ್‌ಸಿ | 1 | 1 | 0 | 0 |
| | | ಸಿಪಿಸಿ | 2 | 1 | 0 | 1 |
| 6 | ಯರಗಟ್ಟಿ ಹೊರ ಠಾಣೆ | ಎಎಸ್ಐ | 1 | 1 | 0 | 0 |
| | | ಸಿಹೆಚ್‌ಸಿ | 1 | 1 | 0 | 0 |
| | | ಸಿಪಿಸಿ | 3 | 3 | 0 | 0 |

| | | |
|---|---|---|
| ಇ) | 21.500 ಹುದ್ದೆಗಳ ನೇಮಕಾತಿಗಾಗಿ ಪ್ರಕಟಣೆಯಾಗಿದ್ದು, ಇವುಗಳಲ್ಲಿ ಸವದತ್ತಿ ತಾಲ್ಲೂಕಿನ ಪೋಲೀಸ್ ಠಾಣೆ ಹಾಗೂ ಹೊರಠಾಣೆಗಳಿಗೆ ಎಷ್ಟು ಸಿಬ್ಬಂದಿಗಳ ನೇಮಕಾತಿಯಾಗಿದೆ..........ಹಾಗೂ 12.500 ಹುದ್ದೆಗಳಿಗೆ ನೀಡಿದ ಪದೋನ್ನತಿಯಲ್ಲಿ, ಮುಂಬಡ್ತಿ ಹೊಂದಿ. ಸವದತ್ತಿಯ ಠಾಣೆಗಳಿಗೆ ನಿಯೋಜನೆಗೊಂಡ ಸಿಬ್ಬಂದಿಗಳು ಎಷ್ಟು? (ವಿವರ ನೀಡುವುದು) | 2016-17 ನೇ ಸಾಲಿನ ಸಿಪಿಸಿ/ಮಪಿಸಿ ಹುದ್ದೆಗಳ ನೇಮಕಾತಿ ಸಂಬಂಧ ಬೆಳಗಾವಿ ಜಿಲ್ಲೆಗೆ ಹಂಚಿಕೆಯಾಗಿರುವ 100 ಹುದ್ದೆಗಳ ಪೈಕಿ 97 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ಹೊರಡಿಸಲಾಗಿರುತ್ತದೆ. ಉಳಿದ 03 ಅಭ್ಯರ್ಥಿಗಳಲ್ಲಿ 01 ಅಭ್ಯರ್ಥಿಯ ದಾಖಲಾತಿ ಪರಿಶೀಲನೆಯಲ್ಲಿರುತ್ತದೆ. 02 ಅಭ್ಯರ್ಥಿಗಳ ಬದಲಾಗಿ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಮ ವಹಿಸಲಾಗುತ್ತಿದೆ. ನೇಮಕಾತಿ ಮಾಡಲಾದ 97 ಅಭ್ಯರ್ಥಿಗಳಲ್ಲಿ 87 ಅಭ್ಯರ್ಥಿಗಳು ಕರ್ತವ್ಯಕ್ಕೆ ಹಾಜರಾಗಿದ್ದು, ಸದರಿಯವರು ಬುನಾದಿ ತರಬೇತಿಯಲ್ಲಿರುತ್ತಾರೆ.<br>2017-18ನೇ ಸಾಲಿನಲ್ಲಿ 150 ಹುದ್ದೆಗಳಲ್ಲಿ 30 ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ಹೊರಡಿಸಲಾಗಿರುತ್ತದೆ. 99 ಅಭ್ಯರ್ಥಿಗಳ ದಾಖಲಾತಿ ಪರಿಶೀಲನೆಯಲ್ಲಿರುತ್ತದೆ. 21 ಅಭ್ಯರ್ಥಿಗಳ ಬದಲಾಗಿ ಬೇರೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಮ ವಹಿಸಲಾಗುತ್ತಿದೆ.<br>ನೇಮಕಾತಿ / ತರಬೇತಿ ನಂತರ ಜಿಲ್ಲೆಯ ಠಾಣೆಗಳಿಗೆ ಮತ್ತು ಸವದತ್ತಿ ತಾಲ್ಲೂಕಿನ ಠಾಣೆಗಳಿಗೆ / ಹೊರಠಾಣೆಗಳಿಗೆ ಆದ್ಯತೆಯ ಮೇರೆಗೆ ಸ್ಥಳ ನಿಯುಕ್ತಿಗೊಳಿಸಲಾಗುವುದು. |

| | | |
|---|---|---|
| | | 12500 ಹುದ್ದೆಗಳಿಗೆ ನೀಡಿದ ಪದೋನ್ನತಿಯಲ್ಲಿ, ಎಎಸ್ಐ-02, ಸಿಹೆಚ್‌ಸಿ-12 ರವರುಗಳಿಗೆ ಮುಂಬಡ್ತಿ ನೀಡಿ, ಒಟ್ಟು-14 ಸಿಬ್ಬಂದಿಗಳನ್ನು ಸವದತ್ತಿ ತಾಲ್ಲೂಕಿನ ಠಾಣೆಗಳಿಗೆ ನಿಯೋಜಿಸಲಾಗಿರುತ್ತದೆ. |

ಒಇ 129 ಪೊಸಿಇ 2018

(ಡಾ: ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 514 |
| 02. | ಸದಸ್ಯರ ಹೆಸರು | : | ಶ್ರೀ ಗೂಳಿಹಟ್ಟಿ ಡಿ. ಶೇಖರ್ (ಹೊಸದುರ್ಗ) |
| 03. | ಉತ್ತರಿಸುವ ದಿನಾಂಕ | : | 11.07.2018 |
| 04. | ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಹೊಸದುರ್ಗಾ ತಾಲ್ಲೂಕಿನ ಪೋಲೀಸ್ ಇಲಾಖೆ ಸಿಬ್ಬಂದಿಯು ಸಂಪೂರ್ಣವಾಗಿ ಮರಳನ್ನು ಸಂಗ್ರಹಿಸುವ ಸ್ಥಳಗಳ ಬಳಿ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದನ್ನು ತಡೆಗಟ್ಟಲು ಸರ್ಕಾರದವರು ಕೈಗೊಂಡ ಕ್ರಮಗಳೇನು? | ಮರಳನ್ನು ಸಂಗ್ರಹಿಸುವ ಸ್ಥಳಗಳ ಬಳಿ ಹೊಸದುರ್ಗಾ ತಾಲ್ಲೂಕಿನ ಪೋಲೀಸ್ ಇಲಾಖೆಯ ಯಾವುದೇ ಸಿಬ್ಬಂದಿಗಳು ಸಂಪೂರ್ಣವಾಗಿ ಕಾರ್ಯ ನಿರ್ವಹಿಸುತ್ತಿರುವುದಿಲ್ಲ.<br>ಆದಾಗ್ಯೂ ಅಕ್ರಮ ಮರಳು ಸಂಗ್ರಹಣೆ ಮತ್ತು ಸಾಗಾಣಿಕೆ ಮಾಹಿತಿಯು ಮಾಹಿತಿದಾರರಿಂದ ಬಂದ ತಕ್ಷಣ ಅಂತಹ ಸ್ಥಳಕ್ಕೆ ಭೇಟಿ ನೀಡಿ ಸಂಗ್ರಹಿಸುತ್ತಿರುವ ಮರಳನ್ನು ವಶಪಡಿಸಿಕೊಂಡು ಆರೋಪಿಗಳ ವಿರುದ್ಧ ಕಾನೂನು ರೀತ್ಯಾ ಕ್ರಮ ಕೈಗೊಳ್ಳಲಾಗುತ್ತಿದೆ.<br>ಹೊಸದುರ್ಗಾ ವೃತ್ತ ವ್ಯಾಪ್ತಿಯಲ್ಲಿ ಅಕ್ರಮ ಮರಳು ಸಂಗ್ರಹಣೆ ಮತ್ತು ಸಾಗಾಣಿಕೆ ಮಾಡುವವರ ಮೇಲೆ 2016, 2017 ಮತ್ತು 2018 ಜೂನ್ ಮಾಹೆಯವರೆಗೆ ದಾಖಲಾದ ಪ್ರಕರಣಗಳ ವಿವರ ಈ ಕೆಳಗಿನಂತಿದೆ. |

| ವರ್ಷ | ದಾಖಲಿಸಿದ ಒಟ್ಟು ಪ್ರಕರಣಗಳ ಸಂಖ್ಯೆ | ಬಂಧಿಸಿದ ಒಟ್ಟು ಆರೋಪಿಗಳ ಸಂಖ್ಯೆ | ಅಮಾನತ್ತು ಪಡಿಸಿಕೊಂಡ ವಾಹನಗಳ ಸಂಖ್ಯೆ | | |
|---|---|---|---|---|---|
| | | | ಲಾರಿ | ಟ್ರ್ಯಾಕ್ಟರ್ | ಇತರೆ |
| 2016 | 95 | 200 | 89 | 83 | 03 |
| 2017 | 92 | 122 | 20 | 69 | 04 |
| 2018 (ಜೂನ್) | 34 | 63 | 11 | 35 | - |

ಒಇ 131 ಮೊಸಿಇ 2018

(ಡಾ: ಜಿ. ಪರಮೇಶ್ವರ)
ಉಪ ಮುಖ್ಯಮಂತ್ರಿ